# "ಇರ್ವಿನ್ ನಾಲಾ ರೈತ ಚಳವಳಿ"

- ಒಂದು ಅಧ್ಯಯನ

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ


ನಿಬಂಧಕಾರರು

ಜ್ಯೋತಿ ಸಿ.

ಇತಿಹಾಸ ಎಂ.ಫಿಲ್. ಅಭ್ಯರ್ಥಿ

ಮಾರ್ಗದರ್ಶಕರು :

**ಡಾ, ಟಿ.ವಿ. ನಾಗರಾಜ**

ಆಯ್ಕೆಶ್ರೇಣಿ

ಇತಿಹಾಸ ಉಪನ್ಯಾಸಕರು

ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.





ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,

ಕರ್ನಾಟಕ ಸಂಘ (ರಿ), ಮಂಡ್ಯ.

ನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

**2007-2008**

# "ಇರ್ವಿನ್ ನಾಲಾ ರೈತ ಚಳವಳಿ"

- ಒಂದು ಅಧ್ಯಯನ

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ


ನಿಬಂಧಕಾರರು

ಜ್ಯೋತಿ ಸಿ.

ಇತಿಹಾಸ ಎಂ. ಫಿಲ್. ಅಭ್ಯರ್ಥಿ





ಮಾರ್ಗದರ್ಶಕರು :

**ಡಾ, ಟಿ.ವಿ. ನಾಗರಾಜ**

ಆಯ್ಕೆಶ್ರೇಣಿ
ಇತಿಹಾಸ ಉಪನ್ಯಾಸಕರು
ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.








**ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,**
**ಕರ್ನಾಟಕ ಸಂಘ (ರಿ), ಮಂಡ್ಯ.**
**(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)**

**2007-2008**

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಇರ್ವಿನ್ ನಾಲಾ ರೈತ ಚಳವಳಿ- ಒಂದು ಅಧ್ಯಯನ"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಎಂ.ಫಿಲ್ ಪದವಿಗಾಗಿ ಜ್ಯೋತಿ. ಸಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದಾವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇವೆ.

**ಸ್ಥಳ** : ಮಂಡ್ಯ

**ದಿನಾಂಕ** : 12/09/08

T.V. Nagaraj

ಡಾ. ಟಿ. ವಿ. ನಾಗರಾಜ
ಆಯ್ಕೆಶ್ರೇಣಿ
ಇತಿಹಾಸ ಉಪನ್ಯಾಸಕರು
ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಜ್ಯೋತಿ. ಸಿ. ಆದ ನಾನು ಎಂ.ಫಿಲ್. ಅಭ್ಯರ್ಥಿಯಾಗಿ ಪ್ರವೇಶ ಪಡೆದಿರುತ್ತೇನೆ. ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಇರ್ವಿನ್ ನಾಲಾ ರೈತ ಚಳವಳಿ-ಒಂದು ಅಧ್ಯಯನ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಟಿ.ವಿ.ನಾಗರಾಜ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ. ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಲ್ಲಿ ಮತ್ತು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತಿದ್ದೇನೆ. ಹಂಪಿಯ ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್.ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

Jyothi C.

**ಸ್ಥಳ : ಮಂಡ್ಯ**

**ದಿನಾಂಕ :** 12. 09. 2008

ಜ್ಯೋತಿ. ಸಿ.
ಇತಿಹಾಸ ಎಂ.ಫಿಲ್ ವಿದ್ಯಾರ್ಥಿನಿ,
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
ಕರ್ನಾಟಕ ಸಂಘ, ಮಂಡ್ಯ.

# ಪರಿವಿಡಿ

# ಅಧ್ಯಾಯ-1

## ಪೀಠಿಕೆ

1.1 ಅಧ್ಯಯನದ ಉದ್ದೇಶ

1.2 ಅಧ್ಯಯನದ ವ್ಯಾಪ್ತಿ

1.3 ಅಧ್ಯಯನದ ಮಹತ್ವ

1.4 ಅಧ್ಯಯನಗಳ ಸಮೀಕ್ಷೆ

1.5 ಅಧ್ಯಯನಗಳ ಕಾರ್ಯವಿಧಾನ

1.6 ಆಧಾರಗಳು

1.7 ಅಧ್ಯಯನಗಳ ವರ್ಗೀಕರಣ

# ಅಧ್ಯಾಯ-1

## ಪೀಠಿಕೆ

ಕೃಷಿ ಮಾನವನ ಚಟುವಟಿಕೆಗಳಲ್ಲಿ ಬಹುಮುಖ್ಯವಾದ ಹಾಗೂ ಅತ್ಯಂತ ಪುರಾತನವಾದ ಕಸುಬಾಗಿದೆ. ಭಾರತವೂ ಕೃಷಿ ಪ್ರಧಾನ ದೇಶವಾಗಿದ್ದು ಜೀವನಾಧಾರ ವೃತ್ತಿಯಾಗಿದೆ. ಅಂತೆಯೇ ಕೃಷಿ ಆರ್ಥಿಕತೆಯ ಬೆನ್ನೆಲುಬಾಗಿದೆ. ಹಾಗಾಗಿ ಕೃಷಿ ಅಭಿವೃದ್ಧಿಗೊಂಡರೆ ಮಾತ್ರ ದೇಶದ ಅಭಿವೃದ್ಧಿಯು ಸಾಧ್ಯವಾಗುತ್ತದೆ. ಕೃಷಿ ಇಂದಿಗೂ ರಾಷ್ಟ್ರೀಯ ಆದಾಯದಲ್ಲಿ ಶೇ. 50 ರಷ್ಟು ತನ್ನ ಕೊಡುಗೆಯನ್ನು ಸಲ್ಲಿಸುತ್ತದೆ. ಕೃಷಿ ಜನರ ಜೀವನ ನಿರ್ವಹಣೆಗೆ ಆಹಾರವನ್ನು ಒದಗಿಸುತ್ತದೆಯಲ್ಲದೆ ಕೈಗಾರಿಕೆಗಳಿಗೆ ಕಚ್ಚಾಸಾಮಗ್ರಿಗಳು ಹಾಗೂ ಹೆಚ್ಚಿನ ಜನರಿಗೆ ಉದ್ಯೋಗಗವನ್ನು ಒದಗಿಸುತ್ತಿದೆ.

ಕೃಷಿ ಅಭಿವೃದ್ಧಿಗೆ ಮುಖ್ಯವಾಗಿ ಅವಶ್ಯಕವಾಗಿ ಬೇಕಾಗಿರುವುದು ನೀರಾವರಿ ವ್ಯವಸ್ಥೆ. ಆದರೆ ನಮ್ಮ ಕೃಷಿ ಭೂಮಿಯ ಅಧಿಕ ಭಾಗ ಮಳೆಯನ್ನೇ ಅವಲಂಭಿಸಿದೆ. ಈ ಮಳೆಯು ಅವ್ಯವಸ್ಥಿತವೂ, ಅನಿರ್ಧಿಷ್ಟವೂ ಆಗಿದ್ದು ಅಗತ್ಯವಾದಾಗ ಕೃಷಿಗೆ ನೀರು ದೊರಕುವುದಿಲ್ಲ.

ಹಾಗಾಗಿ ಕೃಷಿಯನ್ನು "ಮಳೆಯೊಂದಿಗಿನ ಜೂಜಾಟ" ಎಂದು ಕರೆಯಲಾಗಿದೆ. ಇದರಿಂದ ಕೃಷಿ ಚಟುವಟಿಕೆಗಳು ವರ್ಷಪೂರ್ತಿ ನಡೆಯಬೇಕೆಂಬ ಉದ್ದೇಶದಿಂದ ನದಿ ನೀರನ್ನು ಸಂಗ್ರಹಿಸಿ ಅಣೆಕಟ್ಟು ನಿರ್ಮಿಸಿ ಕೃಷಿ ಕಾರ್ಯ ನಡೆಸುತ್ತಿದ್ದರು. ಕೃಷಿಯನ್ನು ರೈತರ ಜೀವನಾಧಾರ ಕಸುಬು ಎಂದು ಹೇಳುತ್ತೇವೆ. ಅವರ ಜೀವನದ ಆಧಾರಸ್ತಂಭವಾಗಿರುವ ಕೃಷಿಯನ್ನೇ ಅವರಿಗೆ ತೊಡಕಾಗುವಮತೆ ರೈತರ ಮೇಲೆ ನಿಯಮ ಹೇರಿದಾಗ ಸಂಯಮದ ಸಾಕಾರ ಮೂರ್ತಿ ಆಗಿದ್ದ ರೈತ ಸಮುದಾಯ ಸಿಡಿದೆದ್ದು ಪ್ರತಿಭಟಿಸುವುದು ಸಾಮಾನ್ಯ. ಅದರ ಪ್ರತಿರೂಪವೇ ಮಂಡ್ಯ ಜಿಲ್ಲೆಯಲ್ಲಿ 1931-32ರ ಕಾಲಾವಧಿಯಲ್ಲಿ ಜರುಗಿದ ಇರ್ವಿನ್ ನಾಲಾ ರೈತ ಹೋರಾಟ.

ಬೆಂಗಳೂರಿನಿಂದ 96 ಕಿ.ಮೀ. ದೂರವಿರುವ ಮಂಡ್ಯ 1939ರ ವರೆಗೂ ಮೈಸೂರು ಪ್ರಾಂತ್ಯಕ್ಕೆ ಸೇರಿದ್ದು ಇಲ್ಲಿನ ಜನತೆಯ ಮುಖ್ಯ ಕಸುಬು ಕೃಷಿಯೇ ಆಗಿತ್ತು. ಮಂಡ್ಯದ ಭೂ ಭಾಗವು ಬಹುತೇಕ ಸಮತಟ್ಟಾದ ಬಯಲು ಪ್ರದೇಶವಾಗಿದ್ದು ಬೆಂಗಾಡಾಗಿತ್ತು. ನೀರಾವರಿ ಸೌಲಭ್ಯ ದೊರೆಯುವವರೆಗೂ ಇಲ್ಲಿನ ಜನತೆ ಮಳೆಯಾಶ್ರಯದಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದರು. ಇದನ್ನು ಮನಗಂಡ ಅರಸರು ರೈತರಿಗೆ ಅನುಕೂಲವಾಗುವಂತೆ ನೀರಾವರಿ ಸೌಕರ್ಯಗಳನ್ನು ಒದಗಿಸಲು ಮುಂದಾದರು. ಅದರಂತೆ ಬೃಹತ್ ಪ್ರಮಾಣದ ಕೆರೆಕಟ್ಟೆ ಬಾವಿಗಳನ್ನು ನಿರ್ಮಿಸಿ ರೈತರಿಗಿದ್ದ ನೀರಿನ ಸಮಸ್ಯೆಗಳನ್ನು ನೀಗಿಸಲು ಪ್ರಯತ್ನಿಸುತ್ತಿದ್ದರು. ಇದರಿಂದ ತರಿ ಮತ್ತು ಖುಷ್ಕಿ ಬೆಳೆಗಳನ್ನು ವಾಣಿಜ್ಯ ಬೆಳಗಳನ್ನು ಬೆಳೆಯುತ್ತಿದ್ದರು. ಅದರೂ ಕೆಲವು ಭಾಗಗಳಿಗೆ ನೀರಿಲ್ಲದೆ ಅವುಗಳು ಬೆಂಗಾಡಗೇ ಉಳಿದಿದ್ದವು. ನಂತರ ಒಡೆಯರ ಕಾಲದಲ್ಲಿ ಕೃಷಿಗೆ ನೀರಾವರಿ ಒದಗಿಸಲು ಅನೇಕ ಪ್ರಯತ್ನಗಳು ನಡೆದವು. ಮಂಡ್ಯ ಪ್ರದೇಶದಲ್ಲಿ ಕಾವೇರಿ ನದಿ ಹರಿಯುತ್ತಿದ್ದರೂ ಅದನ್ನು ಕೃಷಿಗೆ ಬಳಸಿಕೊಳ್ಳುವ ಪ್ರಯತ್ನಗಳು ನಡೆದಿರಲಿಲ್ಲ.

ಒಡೆಯರನ್ನು ಬದಿಗೊತ್ತಿ ಮೈಸೂರನ್ನು ಆಳಿದ ಟಿಪ್ಪು ಸುಲ್ತಾನರು ಕಾವೇರಿ ನದಿಗೆ 70 ಅಡಿ ಎತ್ತರದ ಅಣೆಕಟ್ಟನ್ನು ನಿರ್ಮಿಸಿ ಕೃಷಿ ಭೂಮಿಯ ವ್ಯಾಪ್ತಿಯನ್ನು ಸ್ವಲ್ಪ ಮಟ್ಟಿಗೆ ವಿಸ್ತರಿಸಿದರು. ಮುಂದೆ ಮೈಸೂರಿನ ಅರಸರಾದ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ

ಮೈಸೂರಿನ ಮುಖ್ಯ ಇಂಜಿನಿಯರ್ ಆಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರು 1911-31ರ ಕಾಲಾವಧಿಯಲ್ಲಿ ಕಾವೇರಿ ನದಿಗೆ ಶ್ರೀರಂಗಪಟ್ಟಣ ಸಮೀಪ ಅಣೆಕಟ್ಟೆ ನಿರ್ಮಿಸಿ ಮಂಡ್ಯ, ಮಳವಳ್ಳಿ, ಮದ್ದೂರು, ಪಾಂಡವಪುರ, ಶ್ರೀರಂಗಪಟ್ಟಣ ಪ್ರದೇಶದ ಸುಮಾರು 1,20,000 ಎಕರೆಗೆ ನೀರುಣಿಸಿ ಬೆಂಗಾಡಾಗಿದ್ದ ಪ್ರದೇಶವನ್ನು ಹಚ್ಚ ಹಸಿರಿನಿಂದ ಕಂಗೊಳಿಸುವಂತೆ ಮಾಡಿದರು.

ಕೈಗಾರಿಕೆಗಳ ಪ್ರಗತಿಗೆ ಪ್ರೋತ್ಸಾಹ ನೀಡುತ್ತಿದ್ದ ವಿಶ್ವೇಶ್ವರಯ್ಯನವರೂ ಕೃಷಿ ಕ್ಷೇತ್ರದಲ್ಲೂ ಆಧುನೀಕರಣವನ್ನು ತಂದರು. ರೈತರು ಪಾರಂಪರಿಕವಾಗಿ ಮಾಡುತ್ತಿದ್ದ ಕೃಷಿಗೆ ಯಾಂತ್ರೀಕತೆಯ ಸ್ಪರ್ಶ ನೀಡಿದರು. 1927 ರಲ್ಲಿ ಕೃಷ್ಣರಾಜಸಾಗರದಿಂದ ಹರಿದು ಬರುವ ಕಾವೇರಿ ಶಾಖೆ ಹಾಗೂ ಶಿಂಷಾ ಶಾಖೆಯಾಗಿರುವ ಇರ್ವಿನ್ (ಈಗಿನ ವಿಶ್ವೇಶ್ವರಯ್ಯ) ನಾಲೆ ವ್ಯಾಪ್ತಿಗೊಳಪಡುವ ಪ್ರದೇಶಗಳಲ್ಲಿ ರೈತರು ಅನುಸರಿಸಬೇಕಾದ ವ್ಯವಸಾಯ ಕ್ರಮ, ನೀರಿನ ದರ, ಕಂದಾಯ ಇತ್ಯಾದಿ ಕ್ರಮಗಳನ್ನು ಹೇರಿದರು. ಇದರಿಂದ ಈ ಭಾಗದ ರೈತರಿಗೆ ಆರ್ಥಿಕವಾಗಿ ತುಂಬಾ ತೊಂದರೆಯಾಗುತ್ತಿತ್ತು. ಹಾಗಾಗಿ ರೈತರು ಸರ್ಕಾರ ಹೇರಿರುವ ಈ ಕ್ರಮಗಳನ್ನು ತೆಗೆದುಹಾಕಬೇಕೆಂದು ವಿನಮ್ರವಾಗಿ, ಶಾಂತಿಯುತವಾಗಿ ಕೇಳಿಕೊಂಡರು. ಅದರೆ ಸರ್ಕಾರ ರೈತರ ಈ ವಿನಮ್ರತೆಯ ಕೋರಿಕೆಯನ್ನು ನಿರ್ಲಕ್ಷಿಸಿದರು. ತಮ್ಮಗಳ ಸಮಸ್ಯೆಗಳನ್ನು ನಿರ್ಲಕ್ಷಿಸಿದ ಸರ್ಕಾರದ ಈ ಕ್ರಮಕ್ಕೆ ಸಿಟ್ಟಿಗೆದ್ದ ರೈತರು ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿ ಬೆಂಗಳೂರಿಗೆ ಜಾಥಾ ಹೊರಟು ಚಳುವಳಿ ನಡೆಸಿದರು. ಪ್ರಭುತ್ವದವರ ಅಧಿಕಾರ, ಶೋಷಣೆ, ದಬ್ಬಾಳಿಕೆ, ಹಿಂಸೆ ವಿರುದ್ಧ ರೈತ ವರ್ಗವೂ ಶಾಂತಿಯುತವಾಗಿ ಅಹಿಂಸಾರೂಪದಲ್ಲಿ ಯಾವ ರೀತಿ ಪ್ರತಿ ಏಟು ನೀಡಿದರು ಎಂಬುದನ್ನು ತಿಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಹಾಗಾಗಿ ಮಂಡ್ಯ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಪೂರ್ವಭಾವಿಯಾಗಿ ಸಂಭವಿಸಿದ ಇರ್ವಿನ್ ನಾಲಾ ಚಳವಳಿಯ ರೈತ ಸಂಘಟನೆಯ ಪ್ರಥಮ ಪ್ರದರ್ಶನವಾಗಿತ್ತು.

## 1.1 ಅಧ್ಯಯನದ ಉದ್ದೇಶಗಳು

ಇರ್ವಿನ್ ನಾಲಾ ರೈತ ಚಳವಳಿಯ ಮೂಲತಃ ಕೃಷ್ಣರಾಜಸಾಗರ ಅಣೆಕಟ್ಟಿನ ನಿರ್ಮಾಣದಿಂದ ಉದ್ಭವಿಸಿದ್ದು ಕೆ.ಆರ್.ಎಸ್‌ನ ನಿರ್ಮಾಣ, ಅದರ ಉದ್ದೇಶಗಳೇನಾಗಿದ್ದವು? ಎಂಬುದನ್ನು ವಿವರವಾಗಿ ತಿಳಿಸುವುದೊಂದಿಗೆ ಇರ್ವಿನ್ ನಾಲೆಯನ್ನು ಯಾವಾಗ, ಯಾವ ಉದ್ದೇಶಕ್ಕಾಗಿ ಸ್ಥಾಪಿಸಲಾಯಿತ್ತು? ಇರ್ವಿನ್ ನಾಲೆಯ ನಿರ್ಮಾಣದಿಂದ ಆ ಭಾಗದ ರೈತರಿಗೆ ಎದುರಾದ ತೊಡಕುಗಳೇನು? ಪ್ರಭುತ್ವದವರ ವಿರುದ್ಧ ರೈತ ಸಮುದಾಯದವರು ಆಕ್ರೋಶಗೊಳ್ಳಲು ಉಂಟಾದ ಪರಿಸ್ಥಿತಿಗಳೇನು? ಎಂಬುದನ್ನು ಕೂಲಂಕುಷವಾಗಿ ಅಧ್ಯಯನ ಮಾಡುವುದಾಗಿದೆ.

ಈ ನಾಲಾ ರೈತರ ಚಳವಳಿಯ ಸ್ವರೂಪ ಹೇಗಿತ್ತು? ಈ ನಾಲಾ ಭಾಗದಲ್ಲಿ ಸರ್ಕಾರದ ವಿರುದ್ಧ ಸಿಡಿದೆದ್ದ ರೈತರ ಸಂಘಟನೆ ಹೇಗಿತ್ತು ? ಈ ಚಳವಳಿಯ ನಾಯಕತ್ವವನ್ನು ವಹಿಸಿದ್ದ ನಾಯಕರ ವ್ಯಕ್ತಿತ್ವದಿಂದ ರೈತರು ಪ್ರಭಾವಿತರಾಗಿದ್ದರೆ ಎಂಬ ವಿಷಯವನ್ನು ವಿಮರ್ಶಾತ್ಮಕವಾಗಿ ವಿವರಿಸುವುದಾಗಿದೆ.

ಇರ್ವಿನ್ ನಾಲಾ ಪ್ರದೇಶದ ರೈತ ಚಳವಳಿಯು ಸರ್ಕಾರದ ಕ್ರಮಗಳಿಂದ ತಮಗಾದ ಸಮಸ್ಯೆಗಳ ಪರಿಹಾರಕ್ಕಾಗಿ ನಡೆದ ಚಳವಳಿಯೇ ? ಅಥವಾ ಮುಂದೆ ನಡೆದ ಸ್ವಾತಂತ್ರ್ಯ ಚಳವಳಿಗೆ ಸ್ಫೂರ್ತಿ ನೀಡುವ ತಯಾರಿ ಆಗಿತ್ತೇ? ಎಂಬುದನ್ನು ತಿಳಿಸುವುದು ಕೂಡ ಅಧ್ಯಯನದ ಉದ್ದೇಶವಾಗಿದೆ. ಸಂಘಟಿತರಾಗಿದ್ದ ರೈತರ ಈ ಚಳವಳಿಯನ್ನು ಒಡೆಯಲು ಸರ್ಕಾರ ಅನುಸರಿಸಿದ ಕುತಂತ್ರ ನೀತಿಗಳನ್ನು ಹಾಗೂ ಅದಕ್ಕೆ ಬಲಿಯಾದ ರೈತರ ಪರಿಸ್ಥಿತಿಯನ್ನು ಚಿಂತಿಸುವ ಉದ್ದೇಶವನ್ನು ಒಳಗೊಂಡಿದೆ.

ಒಟ್ಟಾರೆ ಪ್ರಸ್ತುತ ಈ ಅಧ್ಯಯನವು ಜಿಲ್ಲೆಯಲ್ಲಿ ಕೃಷಿಗಾಗಿ ರೈತರ ಒಳಿತಿಗಾಗಿ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸಬೇಕು ಎಂಬ ವಿಷಯದಲ್ಲಿ ಪ್ರಭುತ್ವದವರಿಗೂ ಮತ್ತು ರೈತ ಸಮುದಾಯಗಳ ನಡುವೆ ಉಂಟಾದ ಸಂಘರ್ಷಣೆಯನ್ನು ಚರ್ಚಿಸುವುದಾಗಿದೆ.

## 1.2 ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನ ಕೃಷ್ಣರಾಜ ಸಾಗರ ಜಲಾಶಯದ ಆಡಿಯಲ್ಲಿ ಅಚ್ಚುಕಟ್ಟಿನ ವಿಸ್ತರಣಾ, ಕಾಮಗಾರಿಯಾಗಿ ಸುಮಾರು 1,20,000 ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುವ "ಇರ್ವಿನ್ ನಾಲಾ" ನಿರ್ಮಾಣವಾದ ನಂತರದಲ್ಲಿ ರೈತ ಚಳುವಳಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗಾಗಿ 1931 ರಲ್ಲಿ ಚಳವಳಿ ಅಚ್ಚುಕಟ್ಟಿನ ರೈತ ಸಮುದಾಯಗಳ ಪ್ರದೇಶಕ್ಕೆ ಸೀಮಿತವಾಗಿದೆ. ಈ ಅಚ್ಚುಕಟ್ಟು ಪ್ರದೇಶದಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು, ಮಂಡ್ಯ, ಪಾಂಡವಪುರ, ಶ್ರೀರಂಗಪಟ್ಟಣ ಮತ್ತು ಮಳವಳ್ಳಿ ತಾಲ್ಲೂಕುಗಳ ಪ್ರದೇಶದಲ್ಲಿ ಇರುವುದರಿಂದ ಆ ಭಾಗದ ರೈತ ಸಮುದಾಯಗಳು ಚಳವಳಿಯಲ್ಲಿ ಭಾಗವಹಿಸಿದ ಕಾರಣ ಅಧ್ಯಯನದ ವ್ಯಾಪ್ತಿಯನ್ನು ಪ್ರಾದೇಶಿಕ ಚೌಕಟ್ಟಿಗೆ ಸೀಮಿತಗೊಳಿಸಲಾಗಿದೆ.

ಅಚುಕಟ್ಟಿನ ನಿರ್ಮಾಣದ ನೀತಿ, ಆಶಯ, ಸ್ವರೂಪ, ಕಾರ್ಯಯೋಜನೆಗಳು, ರಾಜ್ಯದ ನೀರಾವರಿ ನೀತಿ ಅನುಷ್ಠನದ ಚೌಕಟ್ಟಿನಲ್ಲಿ ಪರಿಭಾವಿಸಲಾಗಿದೆ. ಚಳವಳಿಯ ಉಗಮ, ವ್ಯಾಪಕತೆ, ಸ್ವರೂಪ, ಪರಿಣಾಮಗಳನ್ನು ಅಧ್ಯಯನದ ಕ್ಷೇತ್ರಕ್ಕೆ ಮೀಸಲಿರಿಸಲಾಗಿದೆ.

## 1.3 ಅಧ್ಯಯನದ ಮಹತ್ವ

ಅಭ್ಯುದಯ ಮಾದರಿಗಳಲ್ಲಿ ಆರ್ಥಿಕ ಪ್ರಗತಿ ಹಾಗೂ ಕೃಷಿ ಸ್ವಾವಲಂಬನೆ ಸಾಧಿಸಲು ಭಾರಿ ಹಾಗೂ ಮಧ್ಯಮ ನೀರಾವರಿ ಯೋಜನೆಗಳಿಗೆ ಪ್ರಾಶಸ್ತ್ಯ ಕೊಟ್ಟರೂ, ಅವುಗಳಿಗೆ ತಗಲುವ ಅಪಾರ ವೆಚ್ಚ, ಕಾರ್ಯನಿರ್ವಹಣಾ ಚಟುವಟಿಕೆಗಳು ಸವಲಾಗಿದ್ದವು, ಸರ್.ಎಂ. ವಿಶ್ವೇಶ್ವರಯ್ಯನವರ ದೂರದೃಷ್ಠಿ, ಕಾರ್ಯದಕ್ಷತೆ ಈ ಸವಾಲನ್ನು ಸ್ವೀಕರಿಸಿ ಬೃಹತ್ ನೀರಾವರಿ ಯೋಜನೆಯನ್ನು ಆರಂಭಿಸಿದರು, ಈ ಹಿನ್ನೆಲೆಯಲ್ಲಿ ಅಚ್ಚುಕಟ್ಟಿನ ಭಾಗಗಳಲ್ಲಿ ನಾಲಾ ನಿರ್ಮಾಣ, ಕೃಷಿ ಚಟುವಟಿಕೆಗಳ ವಿಸ್ತರಣೆ, ಬೆಳೆ ಪದ್ದತಿ ಮಹತ್ವ ಪಡೆಯುತ್ತವೆ. ಅಂದಿನ ಹಲವು ರಾಜ ಮುತ್ಸದ್ಧಿಗಳ ವಿರೋಧದ ನಡುವೆಯೂ ಜಲಾಶಯ ನಿರ್ಮಾಣಕ್ಕೆ ಅಪಾರ

ಸಂಪನ್ಮೂಲಗಳನ್ನು ಹೂಡಲಾಯಿತು. ಸಂಪನ್ಮೂಲ ಹೂಡಿಕೆ ನಂತರದ ಘಟ್ಟಗಳಲ್ಲಿ ಪ್ರತಿಫಲ ನಿರೀಕ್ಷೆಯು ಸಹಜ. ಹೀಗಾಗಿ ಕೃಷಿ ವಿಸ್ತರಣೆಗೆ ಸುಮಾರು ಎರಡೂವರೆ ಕೋಟಿ ವೆಚ್ಚದ ನಾಲಾ ನಿರ್ಮಾಣ ಅನುಷ್ಠಾನಗೊಂಡಿತು. ಪಾರಂಪರಿಕ ಕೃಷಿ ಪದ್ಧತಿಯಲ್ಲಿ ಬದಲಾವಣೆ ಬಯಸಿ ಆಧುನಿಕ ಕೃಷಿ ಪದ್ಧತಿ ಜಾರಿಗೊಳಿಸುವ ಪ್ರಯತ್ನದಲ್ಲಿ ಹಲವು ವೈಜ್ಞಾನಿಕ ಕ್ರಮಗಳನ್ನು ಜಾರಿಗೊಳಿಸಿದರು. ಈ ಸಂದರ್ಭದಲ್ಲಿ ಸರ್ಕಾರದ ಹೊಸ ಕ್ರಮಗಳು ಪಾರಂಪರಿಕ ವಿಧಾನಗಳನ್ನು ಅನುಸರಿಸುತ್ತಿದ್ದ ರೈತರಿಗೆ ಹೊಸ ಭರವಸೆಗಳನ್ನು ಹುಟ್ಟುಹಾಕುವುದರ ಬದಲು ಹೊರೆಯಾಗಿ ಕಾಣಲಾರಂಭಿಸಿದವು. ಈ ಹಿನ್ನೆಲೆಯಲ್ಲಿ ರೈತರ ಆಸಕ್ತಿಗಳು ಪ್ರಭುತ್ವದೊಡನೆ ಸಂಘರ್ಷಕ್ಕೆ ಬರಲು ಕಾರಣವಾದ ಅಂಶಗಳು ಮಹತ್ವ ಪಡೆಯುತ್ತವೆ.

ಈ ತೆರನಾದ ಸಂಘರ್ಷಗಳು ಸಂಘಟನಾ ಸ್ವರೂಪ ಪಡೆಯುವುದರೊಂದಿಗೆ ಹೊಸ ಆಯಮಗಳು ರೂಪುಗೊಂಡವು. ಹೀಗಾಗಿ ರೈತ ಚಳವಳಿ ಅದರಲ್ಲೂ ಹೊಸ ಹೆಜ್ಜೆಗಳನ್ನು ಇಡಬೇಕಾದ ಕ್ರಾಂತಿಕಾರಕ ಪಥದಲ್ಲಿ ಸಾಗಬೇಕಾದ ಸಂದರ್ಭದಲ್ಲಿ ಚಳವಳಿ ರೂಪ ಪಡೆದದ್ದು ಮಹತ್ವ ಪಡೆಯುತ್ತದೆ.

ರೈತರ ನಾಯಕತ್ವ, ಸಂಘಟನಾ ಕೌಶಲ್ಯ, ಶಾಂತಿಯುತ ಪರಿಕ್ರಮ, ಹುನ್ನಾರಗಳ ಪ್ರಚೋದನೆ ಎಲ್ಲವೂ ಮುಖ್ಯವೆನಿಸಿ, ನೀತಿ ನಿರ್ಧಾರಗಳ ಪ್ರಕ್ರಿಯೆಯಲ್ಲಿ ಮಹತ್ವವೆನಿಸುತ್ತದೆ. ಒಟ್ಟಾರೆ ಫಲಶೃತಿ ಭವಿಷ್ಯದ ದಿನಗಳಿಗೆ ಹೊಸ ದಿಕ್ಕು ದೆಸೆಗಳನ್ನು ಹುಟ್ಟು ಹಾಕುತ್ತಿವೆ. ರೈತರ ಹೋರಾಟದ ಬದುಕು, ಚಳವಳಿ ಹಾದಿಯಲ್ಲಿ ಪ್ರಸ್ತುತತೆ ಮಹತ್ವ ಪಡೆದಿದೆ.

## 1.4 ಅಧ್ಯಯನಗಳ ಸಮೀಕ್ಷೆ

ರಾಷ್ಟ್ರ ಹಾಗೂ ರಾಜ್ಯ ಮಟ್ಟದಲ್ಲಿ ರೈತ ಹೋರಾಟಗಳು ಕುರಿತಂತೆ ಹಲವಾರು ಅಧ್ಯಯನಗಳು ನಡೆದಿವೆ. ಬಹುತೇಕ ಪ್ರಾದೇಶಿಕ ನೆಲೆಯಲ್ಲಿನ ಹೋರಾಟಗಳು ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಬೃಹತ್ ಸ್ವರೂಪ ಪಡೆದಿವೆ. ಹೆಚ್.ವಿ. ನಾಗೇಶ್ ಮತ್ತು ಎ.ಇ. ಪುನೀತ್‌ರವರು

"ಭಾರತದಲ್ಲಿ ರೈತ ಹೋರಾಟಗಳು" ಎಂಬ ಕೃತಿಯಲ್ಲಿ ಸಂಕ್ಷಿಪ್ತವಾದ ಸಮೀಕ್ಷೆಯನ್ನು ನೀಡಿರುತ್ತಾರೆ. ಎಂ.ವಿ. ನಾಡಕರ್ಣಿ "ಕರ್ನಾಟಕದ ರೈತ ಹೋರಾಟಗಳು" ಎಂಬ ಕೃತಿಯಲ್ಲಿ ರೈತ ಹೋರಾಟಗಳ ಸ್ವರೂಪ ಮತ್ತು ವಿವಿಧ ಆಯಾಮಗಳನ್ನು ಚರ್ಚಿಸಿರುತ್ತರೆ. ಅಲ್ಲದೆ ಕರ್ನಾಟಕ ಇತಿಹಾಸದ ಸಂಪೂಟಗಳಲ್ಲಿ ಪ್ರಾಸಂಗಿಕವಾಗಿ ಅಲ್ಲಲ್ಲಿ ನಗರ ದಂಗೆ, ಕಾಗೋಡು ಸತ್ಯಾಗ್ರಹದಂತಹ ಘಟನೆಗಳು ಪ್ರಸ್ತಾಪಗೊಂಡಿವೆ. ಇತ್ತೀಚೆಗೆ ಹಲವು ವಿದ್ವಾಂಸರು ತಮ್ಮ ಪಿ.ಹೆಚ್.ಡಿ. ಸಂಶೋದನೆಗಳಿಗಾಗಿ ಹಲವು ವಿಶ್ವವಿದ್ಯಾನಿಲಯಗಳಿಗೆ ರೈತ ಹೋರಾಟಗಳನ್ನು ಕುರಿತಂತೆ ಪ್ರೌಢ ಪ್ರಬಂಧಗಳನ್ನು ಸಲ್ಲಿಸಿದ್ದಾರೆ. ಬಹುತೇಕ ಇವು ಅಪ್ರಕಟಿತವಾಗಿದ್ದು ಸಾರ್ವತ್ರಿಕ ಪರಾಮರ್ಶನೆಗೆ ಲಭ್ಯವಾಗಿಲ್ಲ.

ಈ ಹಿನ್ನೆಲೆಯಲ್ಲಿ ಮಂಡ್ಯದ ರೈತ ಸಮುದಾಯ, ಪ್ರಸ್ತುತ ಹೋರಾಟಗಳು - ಅದು ಕಾವೇರಿ ವಿವಾದವಾಗಲಿ ಅಥವಾ ಕರ್ನಾಟಕ ರಾಜ್ಯ ರೈತ ಸಂಘ ಅಥವಾ ಯಾವುದೇ ಕೃಷಿ ಸಂಬಂಧಿತ ಸಂಘರ್ಷಕ್ಕೆ ತೀವ್ರವಾಗಿ ಸಕ್ರಿಯವಾಗಿ ಸ್ಪಂದಿಸಲು ಸಮುದಾಯದ ನೆಲೆಯಲ್ಲಿ 1930ರ ದಶಕದಲ್ಲಿ ಒಂದು ಚಳವಳಿ ಹೇಗೆ ನಡೆಯಿತು? ಸ್ವರೂಪವೇನು? ಆಯಮಗಳು ಕುರಿತಂತೆ ಕುತೂಹಲದ ಜೊತೆಗೆ ಆಸಕ್ತಿ ಮೂಡಿಸಿತು. ಈ ಕುರಿತಂತೆ ಕೆಲವೇ ಬಿಡಿ ಲೇಖನಗಳು ಪ್ರಕಟವಾಗಿದ್ದರೂ ಸಹ ಅವು ಚಾರಿತ್ರಿಕ ಸಂಶೋಧನಾ ವಿಧಾನಗಳಿಗೆ ಅನುಗುಣವಾಗಿಲ್ಲ. ಕೇವಲ ವರದಿ ರೂಪದಲ್ಲಿವೆ , ಹೀಗಾಗಿ ಈ ಕುರಿತಂತೆ ಪ್ರಸ್ತುತ ವಿಶೇಷವನ್ನು ಅಧ್ಯಯನಕ್ಕೆ ಒಳಪಡಿಸಿದೆ.

## 1.5 ಅಧ್ಯಯನದ ಕಾರ್ಯವಿಧಾನ

ವಸಾಹತು ನೆಲೆಯಲ್ಲಿ ಅಭಿವ್ಯಕ್ತಿಗೊಂಡ ಈ ಚಳವಳಿಯು ಅಧಿಕಾರಶಾಹಿ ವ್ಯವಸ್ಥೆ ವಿರುದ್ಧ ನಡೆದುದ್ದಾಗಿದ್ದು ಚಾರಿತ್ರಿಕ ಹಿನ್ನಲೆಯಲ್ಲಿ ಇದನ್ನು ಅಧ್ಯಯನ ಮಾಡಲಾಗಿದೆ. ಉದಾರೀಕರಣ ಹಾಗೂ ಜಾಗತೀಕರಣಗಳ ಪ್ರಭಾವ ಕೃಷಿ ಕ್ಷೇತ್ರಗಳ ಮೇಲೂ ಆಗುತ್ತಿರುವ

ಹಿನ್ನಲೆಯಲ್ಲಿ ರೈತರ ಸ್ಥಿತಿಗತಿ ಮತ್ತು ರೈತ ಚಳವಳಿಗಳ ಮಹತ್ವವನ್ನು ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಇರ್ವಿನ್ ನಾಲಾ ರೈತ ಚಳವಳಿಯ ಆಶಯ, ಹೋರಾಟದ ಸ್ವರೂಪ, ಅದರ ವಿವಿಧ ಆಯಾಮಗಳು, ಸರ್ಕಾರದೊಂದಿಗೆ ಸಂಘರ್ಷನೆಲೆ, ಜನಪ್ರತಿನಿಧಿಗಳ ಸ್ಪಂದನೆಗಳಿಗೆ ಚಾರಿತ್ರಿಕವಾದ ವಿವರಣೆಗಳನ್ನು ನೀಡುವಂತಹ ಕಾರ್ಯವಿಧಾನ ಅಳವಡಿಸಿದೆ. ಪ್ರಸ್ತುತ ಅಧ್ಯಯನದಲ್ಲಿ ಲಭ್ಯವಿರುವ ವಿವರಣೆಯನ್ನು ವಿಶ್ಲೇಷಣೆಗೆ ಒಳಪಡಿಸುವ ಕಾರ್ಯವಿಧಾನ ಅನುಸರಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಇರ್ವಿನ್ ನಾಲಾ ರೈತ ಚಳವಳಿಯನ್ನು ಘಟನಾತ್ಮಕ ಚೌಕಟ್ಟಿನಲ್ಲಿ ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜೊತೆಗೆ, ಈ ಘಟನೆಯನ್ನು ಇರ್ವಿನ್ ನಾಲಾ ವ್ಯಾಪ್ತಿಗೆ ಸೀಮಿತಗೊಳಿಸಿರುವ ಹಿನ್ನಲೆಯಲ್ಲಿ ಒಂದು ಪ್ರಾದೇಶಿಕ ಚರಿತ್ರೆಯನ್ನು ಘಟನಾತ್ಮಕ ಹಿನ್ನಲೆಯಲ್ಲಿ ಕಟ್ಟಿಕೊಡುವ ಪ್ರಯತ್ನವಾಗಿದೆ. ಇರ್ವಿನ್ ನಾಲಾ ರೈತ ಚಳವಳಿಗೆ ಸಂಬಂಧಿಸಿದಂತೆ ರಾಜ್ಯ ಪತ್ರಾಗಾರದಲ್ಲಿ ಲಭ್ಯವಿದ್ದ ಪ್ರಾಥಮಿಕ ಆಧಾರಗಳನ್ನು ಪ್ರಧಾನವಾಗಿ ಬಳಸಿಕೊಳ್ಳಲಾಗಿದೆ. ಪೂರಕವಾಗಿ ಇರ್ವಿನ್ ನಾಲಾ ರೈತ ಚಳುವಳಿಗೆ ಸಂಬಂಧಿಸಿದಂತೆ ಕರ್ನಾಟಕ ಮತ್ತು ಮಂಡ್ಯ ಜಿಲ್ಲೆಯ ರೈತ ಹೋರಾಟಗಳನ್ನು ಕುರಿತಂತೆ ಲಭ್ಯವಿರುವ ಆಧಾರಗಳನ್ನು ಬಳಸಿಕೊಳ್ಳಲಾಗಿದೆ. ಜೊತೆಗೆ ಈ ಚಳವಳಿಯಲ್ಲಿ ಭಾಗವಹಿಸಿದ ವ್ಯಕ್ತಿಗಳ ಆತ್ಮ ಚರಿತ್ರೆಯ ಕೃತಿಗಳಿಂದಲೂ ಮಾಹಿತಿ ಸಂಗ್ರಹಿಸಲಾಗಿದ್ದು ಅವುಗಳ ನೆರವಿನಿಂದ ವಿಶ್ಲೇಷಣಾತ್ಮಕವಾಗಿ ಚರ್ಚಿಸುವ ಪ್ರಯತ್ನವಾಗಿದೆ.

### 1.7 ಆಧಾರಗಳು

ಪ್ರಸ್ತುತ ನಿಬಂಧವನ್ನು ರಚಿಸಲು ಆಧಾರಗಳಾಗಿ ಎಫಿಗ್ರಾಫಿಯ ಕರ್ನಾಟಕದ ಸಂಪುಟ, ರಾಜ್ಯ ಪತ್ರಗಾರದ ವರದಿಗಳು, ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ ಹಾಗೂ ಮಂಡ್ಯ ಜಿಲ್ಲಾ ಸಾಂಖ್ಯಿಕ ಇಲಾಖೆಯಿಂದ ಮಾಹಿತಿಯನ್ನು ಪಡೆಯಲಾಗಿದೆ. ಹೆಚ್.ಕೆ. ವೀರಣ್ಣಗೌಡರ ಆತ್ಮ ಚರಿತ್ರೆಯನ್ನು ಒಳಗೊಂಡಿರುವ ಬದುಕು-ಮೆಲಕು ಕೃತಿ, ಕೆ.ಸಿಂಗಾರಿಗೌಡರವರ ಅಭಿನಂದನಾ ಗ್ರಂಥವಾದ ಸಿಂಗಾರ ಕೃತಿಯನ್ನು ಬಳಸಿಕೊಳ್ಳಲಾಗಿದೆ. ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು

ಸಂಪುಟಗಳನ್ನು, ಶಿವಪುರ ಧ್ವಜ ಸತ್ಯಾಗ್ರಹ ಕೃತಿಯನ್ನು, ಜೊತೆಗೆ ಕೆಲವು ಅಪ್ರಕಟಿತ ಸಂಶೋಧನಾ ಗ್ರಂಥಗಳಿಂದಲೂ ಮಾಹಿತಿಯನ್ನು ಪಡೆಯಲಾಗಿದೆ.

## 1.7 ಅಧ್ಯಾಯಗಳ ವರ್ಗೀಕರಣ

ಅಧ್ಯಯನದ ಅನುಕೂಲಕ್ಕಾಗಿ ಪ್ರಸ್ತುತ ನಿಬಂಧವನ್ನು ಏಳು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

ಮೊದಲನೆಯ ಅಧ್ಯಾಯವು ಪೀಠಿಕೆ, ಉದ್ದೇಶಗಳು, ವ್ಯಾಪ್ತಿ, ಮಹತ್ವ, ಕಾರ್ಯ ವಿಧಾನ, ಇದುವರೆಗಿನ ಅಧ್ಯಯನಗಳು, ಆಧಾರಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯವು ಮಂಡ್ಯ ಜಿಲ್ಲೆಯ ಭೌಗೋಳಿಕ ಹಿನ್ನಲೆ, ಕೃಷ್ಣರಾಜ ಸಾಗರ ಅಣೆಕಟ್ಟಿನ ನಿರ್ಮಾಣದ ಬಗ್ಗೆ ತಿಳಿಸಿಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಇರ್ವಿನ್ ನಾಲೆಯ ನಿರ್ಮಾಣವನ್ನು ಕುರಿತು ವಿವರಣೆ ನೀಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ರೈತ ಚಳವಳಿಗಳ ಸಂಘರ್ಷದ ನೆಲೆಯನ್ನು ಕುರಿತು ತಾತ್ವಿಕವಾಗಿ ಚಿಂತಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಇರ್ವಿನ್ ನಾಲಾ ಪ್ರದೇಶದಲ್ಲಿ ನಡೆದ ರೈತರ ಚಳವಳಿಯ ವಿವಿಧ ಹಂತಗಳನ್ನು ಕುರಿತು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಇರ್ವಿನ್ ನಾಲಾ ರೈತರು ಚಳವಳಿಯನ್ನು ನಡೆಸಿದ ನಂತರ ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಶಾಸಕರು ಈ ವಿಷಯವಾಗಿ ಪ್ರತಿಕ್ರಿಯಿಸಿದ ಬಗೆಯನ್ನು ತಿಳಿಸಿಕೊಡಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಉಪಸಂಹಾರ ರೂಪದಲ್ಲಿ ಪ್ರಸ್ತುತ ನಿಬಂಧದಿಂದ ಗ್ರಹಿಸಿದ ವಿವರಗಳನ್ನು ಕ್ರೋಢಿಕರಿಸಲಾಗಿದೆ.

# ಅಧ್ಯಾಯ-2

# ಮಂಡ್ಯ ಜಿಲ್ಲೆಯ ಭೌಗೊಳಿಕ ಹಾಗೂ ಚಾರಿತ್ರಿಕ ಹಿನ್ನಲೆ

2.1 ಭೌಗೋಳಿಕ ಹಿನ್ನಲೆ

2.2 ಚಾರಿತ್ರಿಕ ಹಿನ್ನಲೆ

2.3 ಮಳೆ ಪ್ರಮಾಣ

2.4 ಜಿಲ್ಲೆ ರೂಪ ಪಡೆದದ್ದು

2.5 ಕೃಷ್ಣರಾಜ ಸಾಗರ ಅಣೆಕಟ್ಟೆಯ ನಿರ್ಮಾಣ

# ಅಧ್ಯಾಯ -2

## ಜಿಲ್ಲೆಯ ಭೌಗೋಳಿಕ ಹಿನ್ನೆಲೆ ಮತ್ತು ಕೃಷಿ ಚೌಕಟ್ಟು

ಭೌಗೋಳಿಕವಾಗಿ ಬಹುತೇಕ ಸಮತಟ್ಟಾದ ಬಯಲು ಪ್ರದೇಶವನ್ನುಳ ಮಂಡ್ಯ ಜಿಲ್ಲೆಯು 1939 ಜುಲೈ 1 ರಂದು ಮೈಸೂರು ಜಿಲ್ಲೆಯಿಂದ ಪ್ರತ್ಯೇಕಗೊಂಡು ನಾಡಿನ ಸಾಹಿತ್ಯ, ಸಂಸ್ಕೃತಿ, ಕ್ರೀಡೆ, ರಾಜಕಾರಣ ಸೇರಿದಂತೆ ಹಲವಾರು ಕ್ಷೇತ್ರಗಳಿಗೆ ತನ್ನದೇ ಆದ ವಿಶಿಷ್ಟ ಕೊಡುಗೆ ನೀಡಿದೆ.

### 2.1 ಭೌಗೋಳಿಕ ಹಿನ್ನೆಲೆ

ಜಿಲ್ಲೆಯು ದಕ್ಷಿಣ ಪ್ರಸ್ಥ ಭೂಮಿಯ ಒಂದು ಭಾಗವಾಗಿದೆ ಮತ್ತು ಸಾಮಾನ್ಯವಾಗಿ ಬಯಲು ಪ್ರದೇಶವಾಗಿದೆ. ಈ ಜಿಲ್ಲೆಯು ರಾಜ್ಯದ 4 ಜಿಲ್ಲೆಗಳಿಂದ ಅವೃತವಾಗಿದೆ. ಉತ್ತರ ಭಾಗವು ತುಮಕೂರು ಮತ್ತು ಹಾಸನ ಜಿಲ್ಲೆಗಳಿಂದಲೂ, ದಕ್ಷಿಣ ಭಾಗವು ಮೈಸೂರು ಜಿಲ್ಲೆಯಿಂದಲೂ ಪೂರ್ವ ಭಾಗವು ಬೆಂಗಳೂರು (ಗ್ರಾ) ಜಿಲ್ಲೆಯಿಂದಲೂ ಮತ್ತು ಪಶ್ಚಿಮ ಭಾಗವು ಹಾಸನ ಮತ್ತು ಮೈಸೂರು ಜಿಲ್ಲೆಗಳಿಂದಲೂ ಸುತ್ತವರಿಯಲ್ಪಟ್ಟಿದೆ. ಅಲ್ಲದೆ ದಕ್ಷಿಣ ಭಾಗದಲ್ಲಿ 76 19'ಮತ್ತು 77 20'ಹಾಗೂ ಪೂರ್ವ ಭಾಗದಲ್ಲಿ 12 13' ಮತ್ತು 13 04' ಅಕ್ಷಾಂಶ ರೇಖಾಂಶಗಳ ಮಧ್ಯದಲ್ಲಿದೆ. [1]

ಮಂಡ್ಯ ಜಿಲ್ಲೆಯು ಪಂಚ ನದಿಗಳ ಬೀಡು, ಕಾವೇರಿ, ಹೇಮಾವತಿ, ಶಿಂಷಾ, ವೀರವೈಷವಿ, ಲೋಕಪಾವನಿ ಇಲ್ಲಿ ಹರಿಯುತ್ತವೆ. ಕಾವೇರಿ ಕೃಪೆಯಿಂದ ಸಮೃದ್ಧ ನೀರಾವರಿಯೊಂದಿಗೆ ಹಚ್ಚ ಹಸಿರಿನಿಂದ ಈ ಜಿಲ್ಲೆ ಕಂಗೊಳಿಸುತ್ತಿದೆ. "ಸಕ್ಕರೆ ನಾಡು" ಮತ್ತು "ಭತ್ತದ ಕಣಜ" ಎಂದು ಮಂಡ್ಯ ಜಿಲ್ಲೆಯನ್ನು ಕರೆಯಲಾಗುತ್ತದೆ. ಏಳು ತಾಲ್ಲೂಕುಗಳನ್ನೊಳಗೊಂಡ ಜಿಲ್ಲೆಯು 4961 ಚದರ ಕಿ.ಮೀ. ವಿಸ್ತೀರ್ಣವಿದೆ. 31 ಹೊಬಳಿಗಳು, 1498 ಗ್ರಾಮಮಗಳಿವೆ 19 ಲಕ್ಷ ಜನಸಂಖ್ಯೆ ಹೊಂದಿದೆ. [2]

## 2.2 ಚಾರಿತ್ರಿಕ ಹಿನ್ನೆಲೆ

ಈ ಜಿಲ್ಲೆಯ ಹೆಸರಿಗೂ ಚಾರಿತ್ರಿಕ ಹಿನ್ನೆಲೆ ಕಂಡು ಬರುವುದು. ಕೃತ ಯುಗದಲ್ಲಿ ಈ ಪ್ರದೇಶವು ದಟ್ಟವಾದ ಕಾಡಿನಿಂದ ಕೂಡಿದ್ದು ಒಬ್ಬ ಋಷಿ ತಪಸ್ಸು ಮಾಡುತ್ತಿದ್ದು ವರದರಾಜಸ್ವಾಮಿ ವಿಗ್ರಹ ಸ್ಥಾಪಿಸಿ ದುಷ್ಠ ಪ್ರಾಣಿಗಳಿಗೆ ವೇದ ಎಂಬ ಪದವನ್ನು ಉಚ್ಚರಿಸಲು ಭೋದಿಸುತ್ತಿದ್ದುದಾಗಿಯೂ, ಈ ಕಾರಣದಿಂದ ವೇದಾರಣ್ಯ ಎಂಬ ಹೆಸರು ಬಂತೆಂದು ಪ್ರತೀತಿ ಇದೆ. ದ್ವಾಪರ ಯುಗದಲ್ಲಿ ಇಂದ್ರವರ್ಮನೆಂಬ ರಾಜನು ಪುಶ್ರಾವೇಕ್ಷೆಯಿಂದ ಬಂದು ಪುತ್ರ ಸಂತಾನವಾದ ಮೇಲೆ ಕೋಟೆ ಮತ್ತು ಅಗ್ರಹಾರಗಳನ್ನು ಕಟ್ಟಿ ಈ ಪ್ರದೇಶಕ್ಕೆ ಮುಂಡವೇಮು ಎಂದು ಕರೆದನೆಂದೂ ಅದು ಕಾಲಕ್ರಮೇಣ ಮಂಡ್ಯ ವಾಗಿ ಪರಿವರ್ತಿತವಾಯಿತು ಎಂದು ಪ್ರತೀತ ಇದೆ. ಅಲ್ಲದೆ ಹಿಂದಿನ ಕಾಲದಲ್ಲಿ ಈ ಕ್ಷೇತ್ರದಲ್ಲಿ ಮಾಂಡವ್ಯ ಋಷಿಯು ತಪಸ್ಸಿದ್ಧಿ ಪಡೆದಿದ್ದರಿಂದ ಈ ಪ್ರದೇಶಕ್ಕೆ ಮಂಡ್ಯ ಎಂಬ ಹೆಸರು ಬಂದಿದೆ ಎಂದೂ ಸಹ ಹೇಳುತ್ತಾರೆ. [3]

## 2.3 ಮಳೆ ಪ್ರಮಾಣ

ಮಂಡ್ಯ ಜಿಲ್ಲೆಯು ಆಹ್ಲಾದಕರವಾದ ಹವಾಮಾನವನ್ನು ಹೊಂದಿದ್ದು ನಾಲ್ಕು ಋತುಗಳನ್ನು ಗುರುತಿಸಲಾಗಿದೆ. ಡಿಸೆಂಬರ್ ನಿಂದ ಫೆಬ್ರವರಿ ತಿಂಗಳಿನವರೆಗಿನ ಋತುವಿನಲ್ಲಿ ಚಳಿ ಇದ್ದು ಶುಭ್ರ ವಾತಾವರಣ ಹಾಗೂ ಒಣ ಹವೆಯು ಕಂಡು ಬರುತ್ತದೆ. ಬೇಸಿಗೆಯಲ್ಲಿ

ಗರಿಷ್ಠ ಉಷ್ಣಾಂಶ 35 ಸೆಂ. ವರೆಗೆ ಏರುತ್ತದೆ ಮತ್ತು ಚಳಿಗಾಲದಲ್ಲಿ ಅತಿ ಕನಿಷ್ಠ ಉಷ್ಣಾಂಶ 10 ಸೆಂ.ಗೆ ಇಳಿಯುತ್ತದೆ. ಸಾಧಾರಣವಾಗಿ ಮೇ ತಿಂಗಳಲ್ಲಿ ಮಳೆ ಪ್ರಾರಂಭವಾಗಿ ಸೆಪ್ಟೆಂಬರ್ ಅಂತ್ಯದವರೆಗೂ ಬೀಳುತ್ತಿರುತ್ತದೆ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆಯ ಪ್ರಮಾಣ 623.2 ಮಿ.ಮೀ. ಆಗಿದೆ. ಜಿಲ್ಲೆಯ ಪಶ್ಚಿಮ ಭಾಗಗಳಲ್ಲಿ ಉಳಿದೆಡೆಗಿಂತ ಹೆಚ್ಚಿನ ಮಳೆಯಾಗುತ್ತದೆ. ಸಾಮಾನ್ಯವಾಗಿ ಏಪ್ರಿಲ್ ತಿಂಗಳಿನಿಂದ ನವೆಂಬರ್ ತಿಂಗಳ ಅವಧಿಯಲ್ಲಿ ಮಳೆಯಗುತ್ತದೆ. ನೈರುತ್ಯ ಮತ್ತು ಈಶಾನ್ಯ ಮಾರುತಗಳಿಂದ ಜಿಲ್ಲೆಯಲ್ಲಿ ಮಳೆ ಬೀಳುತ್ತಿದ್ದು, ಅದರ ಗರಿಷ್ಠ ಪ್ರಮಾಣ ಸೆಪ್ಟೆಂಬರ್ ತಿಂಗಳಿನಲ್ಲಿ ತಲುಪುತ್ತದೆ. ಕೆಲವೊಮ್ಮೆ ಗುಡುಗಿನಿಂದ ಕೂಡಿದ ಬಿರುಮಳೆಯಾಗುವುದು ಕಂಡುಬರುತ್ತದೆ. [4]

## 2.4 ಜಿಲ್ಲೆ ರೂಪ ಪಡೆದಿದ್ದು

ಮೈಸೂರು ಸಂಸ್ಥಾನದ 1937ರ ಜೂನ್‌ನಲ್ಲಿ ನಡೆದ ಮೈಸೂರು ಪ್ರಜಪ್ರತಿನಿಧಿ ಸಭೆ ಯಲ್ಲಿ ಮಂಡ್ಯ ಜಿಲ್ಲೆಗೆ ಪ್ರತೇಕ ಅಸ್ತಿತ್ವಬೇಕೆಂದು ಸದಸ್ಯರಾಗಿದ್ದ ಎಸ್.ಸಿ.ಮಲ್ಲಯ್ಯ ದನಿ ಎತ್ತಿದರು. ಅವರಿಗೆ ಬೆಂಬಲವಾಗಿ ನಿಂತವರು ಎಂ.ಸಿ.ಲಿಂಗೇಗೌಡ, ಮಲ್ಲಯ್ಯ ಅವರ ಪರಿಶ್ರಮದಿಂದಾಗಿ, 1939ರ ಜುಲೈ 1 ರಂದು ಮಂಡ್ಯ ಜಿಲ್ಲೆ ಅಸ್ಥಿತ್ವಕ್ಕೆ ಬಂದಿತು. ಹೈದರಾಲಿ, ಟಿಪ್ಪು ಸುಲ್ತಾನ್ ಮತ್ತು ಮೈಸೂರು ಅರಸರ ಆಳ್ವಿಕೆಯ ಕೆಲ ವರ್ಷ ಕಾಲ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣವು ರಾಜದಾನಿ ಆಗಿತ್ತು. ವಿಶ್ವದ ಪ್ರವಾಸಿ ಭೂಪಟದಲ್ಲೂ ಸ್ಥಾನ ಪಡೆದು ಕೊಂಡಿರುವ ಜಿಲ್ಲೆಯ ಸ್ವಾತಂತ್ರ್ಯ ಚಳವಳಿಯೂ ತನ್ನ ಪ್ರಭಾವವನ್ನು ಬೀರಿದೆ. 1938ರಲ್ಲಿ ಮೈಸೂರು ಕಾಂಗ್ರೇಸ್‌ನ ಪ್ರಥಮ ಅಧಿವೇಶನವು ಜಿಲ್ಲೆಯ ಮದ್ದೂರು ತಾಲ್ಲೂಕಿನ ಶಿವಪುರದಲ್ಲಿ ಧ್ವಜ ಸತ್ಯಾಗ್ರಹವು ನಡೆದು ಸಾವಿರಾರು ಮಂದಿ ಜೈಲು ಸೇರಿದ್ದೂ ಉಂಟು. ಜೊತೆಗೆ ರಾಜ್ಯ ಮತ್ತು ರಾಷ್ಟ್ರ ಕಂಡ ಹತ್ತು ಹಲವು ಪ್ರಬುದ್ಧ ರಾಜಕಾರಣಿಗಳಿಗೆ ಮಂಡ್ಯ ಜಿಲ್ಲೆ ಜನ್ಮ ನೀಡಿದ್ದು ಪ್ರಮುಖ ವಿಷಯವಾಗಿದೆ. [5]

ಮಂಡ್ಯ ಜಿಲ್ಲೆಯೂ ಈ ಎಲ್ಲಾ ಸಾಧನೆಗಳನ್ನು ಸಾಧಿಸಿದ್ದರೂ ಇಪ್ಪತ್ತನೇ ಶತಮಾನದ ಆದಿಭಾಗದವರೆಗೂ ಬೆಂಗಾಡಾಗಿದ್ದು, ಮಳೆಯಾಶ್ರಯದಲ್ಲಿ ಮಾತ್ರ ಬೆಳೆಗಳನ್ನು ಬೆಳೆಯಲಾಗುತ್ತಿತ್ತು ಮಳೆ ಅನಿಶ್ಚಿತತೆಯಿಂದ ಕೂಡಿದ್ದು ಸಕಾಲದಲ್ಲಿ ಕೃಷಿ ಮಾಡಲು ನೀರು ದೊರಕದೆ ರೈತ ನರಳಾಡಬೇಕಾಯಿತ್ತು. ಕೆಲವು ಸಂದರ್ಭದಲ್ಲಿ ಅತಿವೃಷ್ಟಿಯಾಗಿ ಬೆಳೆದ ಬೆಳೆ ಕೊಯ್ಲು ಮಾಡುವಷ್ಟರಲ್ಲಿ ಪ್ರವಾಹದಿಂದ ನಾಶವಾಗುತ್ತಿದ್ದವು. ಈ ದೃಷ್ಟಿಯಿಂದ "ಕೃಷಿಯನ್ನು ಮಳೆಯೊಡನೆ ಆಡುವ ಜೂಟಾಟವೆಂದು ಕರೆಯುವಾಗಿದೆ. ಈ ಮಾತು ಮಂಡ್ಯ ಜಿಲ್ಲೆಗೂ ಅನ್ವಯಿಸುತ್ತದೆ. ಈ ಜಿಲ್ಲೆಯು ಬಹಳಷ್ಟು ಮಟ್ಟಿಗೆ ಶುಷ್ಕ ವಾತಾವರಣವನ್ನು ಹೊಂದಿತ್ತು. ಆಗ ಎಲ್ಲೆಡೆ ಪ್ರಮುಖವಾಗಿ ರಾಗಿ, ಭತ್ತ ಮತ್ತು ಹುರಳಿ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ರೈತರು ಮಳೆಯ ನೀರನ್ನು ಕೆರೆಕಟ್ಟೆಗಳ ಮೂಲಕ ಸಂಗ್ರಹಿಸಿಕೊಂಡು ಬೇಸಾಯ ಮಾಡುತ್ತಿದ್ದರು.

ಹೀಗೆ ಬೆಂಗಾಡಾಗಿದ್ದ ಜಿಲ್ಲೆಯಲ್ಲಿ ಅನೇಕ ನದಿಗಳು ಹುಟ್ಟಿ ಹರಿಯುತ್ತಿದ್ದರೂ ಈ ಭಾಗದ ಬಹುಪಾಲು ಪ್ರದೇಶಕ್ಕಾಗಿ ನೀರಾವರಿ ಸೌಲಭ್ಯ ಇರಲಿಲ್ಲ. ಈ ಹಿನ್ನೆಲೆಯಲ್ಲಿ 1911ರಲ್ಲಿ ನಿರ್ಮಾಣವಾದ ಕೃಷ್ಣರಾಜ ಸಾಗರ ಜಿಲ್ಲೆಯ ಬಹುಭಾಗ ಹಸಿರಿನಿಂದ ಕಂಗೊಳಿಸಿತು. ಹಸಿರು ಕ್ರಾಂತಿ ಪ್ರಭಾವ ಉಂಟಾಗಿ ಬರಡು ಭೂಮಿ ಹಸಿರಿನಿಂದ ಕಂಗೊಳಿಸುವಂತಾಯಿತು. 1931 ರಲ್ಲಿ ಪ್ರಾದೇಶಿಕ ಸಂಶೋಧನಾ ಕೇಂದ್ರ (ಇರ್ವಿನ್/ ವಿಶ್ವೇಶ್ವರಯ್ಯ ನಾಲಾ ಫಾರಂ) ವನ್ನು ಸ್ಥಾಪಿಸಿ ಬೆಳೆಗಳ ಅಭಿವೃದ್ಧಿಗೆ ಹೆಚ್ಚಿನ ಸಂಶೋಧನೆಯನ್ನು ಕೈಗೊಳ್ಳಲು ಸಹಾಯಕವಾಯಿತು. ಮೈಸೂರು ರಾಜ್ಯದಲ್ಲಿ 1952ರಲ್ಲಿ ಪ್ರಚಾರಕ್ಕೆ ಬಂದ ಜಪಾನೀ ಸುಧಾರಿತ ಪದ್ಧತಿಯನ್ನು ಮೊಟ್ಟ ಮೊದಲು ಮಂಡ್ಯ ಜಿಲ್ಲೆಯಲ್ಲಿ ಪರಿಚಯಿಲಾಯಿತು. [6] 1968ರಲ್ಲಿ ಮಣ್ಣು ಪರೀಕ್ಷಾ ಕೇಂದ್ರ (ಈಗ ಮಣ್ಣು ಆರೋಗ್ಯ ಕೇಂದ್ರ)ವನ್ನು ಪ್ರಾರಂಭಿಸಿ ಇದರಿಂದ ವೈಜ್ಞಾನಿಕವಾಗಿ ಮಣ್ಣು ಮಾದರಿಗಳನ್ನು ವಿಶ್ಲೇಷಸಿ ರೈತರಿಗೆ ಮಾಹಿತಿ ನೀಡಲಾಗುತ್ತಿದೆ. ಹೀಗೆ ಕೃಷಿ ಅಭಿವೃದ್ಧಿಗಾಗಿ ಜಿಲ್ಲೆಯಲ್ಲಿ ಕೃಷಿ ಪಾಠಶಾಲೆ, ಗ್ರಾಮೀಣ ಅಭಿವೃದ್ಧಿ ತರಬೇತಿಕೇಂದ್ರ,

ತಳಿ ಅಭಿವೃದ್ಧಿ ಕೇಂದ್ರಗಳನ್ನು ತೆರೆದು ರೈತರ ಅಭಿವೃದ್ಧಿಗೆ ಶ್ರಮಿಸಲಾಗುತ್ತಿದೆ. ಹೀಗಾಗಿ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ 4.98 ಲಕ್ಷ ಹೆ. ನಲ್ಲಿ ಅರಣ್ಯ ಪ್ರದೇಶ 24765 ಹೆ. ವ್ಯವಸಾಯಕ್ಕೆ ಲಭ್ಯವಲ್ಲದ ಪ್ರದೇಶ 82367 ಹೆ. ಸಾಗುವಳಿ ಮಾಡದಿರುವ ಇತರೆ ಭೂಮಿ 83317 ಹೆ. ಬಂಜರು ಭೂಮಿ 60719 ಹೆ. ಹಾಗೂ ಬಿತ್ತನೆಯಾದ ನಿವ್ವಳ ಪ್ರದೇಶ 2.30 ಲಕ್ಷ ಹೆ.2000-01ರ ಕೃಷಿ ಗಣತಿ ಪ್ರಕಾರ 4.92 ಲಕ್ಷ ಹಿಡುವಳಿದಾರರು ಇದ್ದು ವಿಸ್ತೀರ್ಣ 3.26 ಲಕ್ಷ ಹೆ.ಗಳು ಆಗಿತ್ತು 1995-96 ರ ಕೃಷಿ ಗಣತಿಗೆ ಹೋಲಿಸಿದಾಗ (0.43) ಹೆ. ಸರಾಸರಿ ಹಿಡುವಳಿ ಹೆಚ್ಚಾಗಿದೆ. [7]

ಬೆಂಗಾಡಾಗಿದ್ದ ಜಿಲ್ಲೆಯ ಈ ಕೃಷಿ ಕ್ಷೇತ್ರದ ಸಾಧನೆಗೆ ಕೃಷ್ಣರಾಜ ಸಾಗರ ಅಣೆಕಟ್ಟು ನಿರ್ಮಾಣವೇ ಕಾರಣವಾಗಿದೆ. ಈ ಅಣೆಕಟ್ಟೆ ನಿರ್ಮಾಣಕ್ಕೆ ಮೈಸೂರಿನ ಒಡೆಯರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗೂ ಮುಖ್ಯ ಇಂಜಿನಿಯರ್ ಸರ್ ಎಂ. ವಿಶ್ವೇಶ್ವರಯ್ಯನವರ ಆಸಕ್ತಿ ಮೆಚ್ಚುಗೆ ಕಾರಣವಾಗಿದೆ. ಕೆ.ಆರ್.ಎಸ್. ಅಣೆಕಟ್ಟೆ ನಿರ್ಮಾಣ ಕುರಿತ ಸಂಕ್ಷಿಪ್ತ ಮಾಹಿತಿ ಈ ರೀತಿ ಇದೆ.

## 2.5 ಕೃಷ್ಣರಾಜಸಾಗರ ನೀರಾವರಿ ಯೋಜನೆ ಅಥವಾ ಕನ್ನಂಬಂಡಿ ಅಣೆಕಟ್ಟು

ಕಾವೇರಿ ನದಿಗೆ ಅಣೆಕಟ್ಟೆಯನ್ನು ನಿರ್ಮಿಸಿ ನೀರಾವರಿಗಾಗಿ ಬಳಸುವ ಪ್ರಯತ್ನಗಳು ಬಹಳ ಹಿಂದಿನಿಂದಲೂ ನಡೆದಿವೆ. ಶ್ರೀರಂಗಪಟ್ಟಣ ತಾಲ್ಲೂಕಿನ ರಾಂಪುರದ ಕ್ರಿ.ಶ. 905ರ ಶಾಸನದಿಂದ,[8] ಗಂಗ ಅರಸ ಇಮ್ಮಡಿ ರಾಚಮಲ್ಲನ ಅವಧಿಯಲ್ಲಿ "ತಲೆನೆರೆ" ಎಂಬ ಸ್ಥಳದಲ್ಲಿ ಕಾವೇರಿ ನದಿಗೆ ಅಣೆಕಟ್ಟನ್ನು ನಿರ್ಮಿಸಬೇಕೆಂಬ, ಜೈನ ಮುನಿ ಮತಿಸಾಗರ ಪಂಡಿತ ದೇವಭಟ್ಟಾರರ ಕೋರಿಕೆಯಂತೆ ಈ ದಾನವನ್ನು ಪೆರ್ಬಾಣ ಹಳ್ಳಿಯ ಕೇಸಿಗನೆಂಬ ಅಧಿಕಾರಿಗೆ ಅದೇ ಉದ್ದೇಶಕ್ಕಾಗಿ ನೀಡಿದ ಅಂಶ ವೇದ್ಯವಾಗುತ್ತದೆ. 14ನೇ ಶತಮಾನದಲ್ಲಿ

ನಾಗಮಂಗಲದಿಂದ ಆಳುತ್ತಿದ್ದ ಪ್ರಭು ತಿಮ್ಮಣ್ಣ ದಂಡನಾಯಕನ ಸೋದರ ದೇವರಾಜ ಅರಸನು ಕನ್ನಂಬಾಡಿಯ ಬಳಿ ಒಂದು ಕಟ್ಟೆಯನ್ನು ಕಟ್ಟಿಸಿದ್ದನು. ಹರವು, ತೊಂಡನೂರು, ಮಾರ್ಗವಾಗಿ ನಾಗಮಂಗಲ ಪ್ರದೇಶಕ್ಕೆ ನೀರೋಯ್ಯುವುದು ಆತನ ಯೋಜನೆಯಾಗಿತ್ತು. ಈ ಯೋಜನೆಯ ಅಂಗವಾಗಿಯೇ ಪಾಂಡವಪುರ ತಾಲ್ಲೂಕಿನ ಸೀತಾಪುರವನ್ನು ತನ್ನ ತಾಯಿಯ ಹೆಸರಿನಲ್ಲಿ ನಿರ್ಮಿಸಿ ಕನ್ನಂಬಾಡಿಯ ತನ್ನ ಯೋಜನೆಯ ವಿವರಗಳನ್ನು ಶಾಸನದಲ್ಲಿ ದಾಖಲಿಸಿದ್ದಾನೆ.[9] ಎರಡನೆಯದಾಗಿ ಕನ್ನಂಬಾಡಿಯ ಬಳಿ ಅಣೆಕಟ್ಟು ಕಟ್ಟಿಸಿ ವ್ಯವಸಾಯಕ್ಕೆ ನೀರೊದಗಿಸಲು ಮೈಸೂರಿನ ಅರಸ ರಣಧೀರ ಕಂಠೀರವ ನರಸರಾಜರ ಪತ್ನಿ ದೊಡ್ಡಮ್ಮ ಎಂಬುವಳು ತನ್ನಲ್ಲಿದ್ದ ಅಪಾರ ಚಿನ್ನವನ್ನು ಈ ಯೋಜನೆಗೆ ಕಾಣಿಕೆಯಾಗಿ ನೀಡಿದಳೆಂದು ಪ್ರತೀತಿ. ಈಗಲೂ ಶ್ರೀರಂಗಪಟ್ಟಣದ ಒಂದು ನಾಲೆ ಆಕೆಯ ನೆನಪಿಗಾಗಿ "ಬಂಗಾರದೊಡ್ಡಿ ನಾಲೆ" ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಮೈಸೂರಿನ ಇನ್ನೊಬ್ಬ ಅರಸ ಚಿಕ್ಕದೇವರಾಜರು ಈ ಸ್ಥಳದಲ್ಲಿ ದೊಡ್ಡ ಅಣೆಕಟ್ಟು ಕಟ್ಟಿಸಿ ವ್ಯವಸಾಯಾಭಿವೃದ್ಧಿ ಮಾಡಿದ ದಾಖಲೆಗಳು ದೊರೆಯುತ್ತವೆ.[10] ಆದರೆ ವಿಪರೀತ ಮಳೆಯಿಂದಾಗಿ ಕಾವೇರಿಯಲ್ಲಿ ಹಿಂದೆಂದೂ ಕಾಣದ ಪ್ರವಾಹ ಬಂದು ಕಟ್ಟೆ ತಾನಾಗಿಯೇ ಒಡೆಯಿತೆಂದು ತಿಳಿದು ಬರುತ್ತದೆ. ನೀರಾವರಿಗಾಗಿ ಕಾವೇರಿ ನೀರನ್ನು ಬಳಸುವ ರೂಢಿಯನ್ನು ನಂತರದಲ್ಲಿ ಟಿಪ್ಪು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರು ಮುಂದುವರಿಸಿದರು. ಕಾವೇರಿಗೆ ಕನ್ನಂಬಾಡಿ ಅಣೆಕಟ್ಟೆ ನಿರ್ಮಿಸುವ ಯೋಜನೆಯನ್ನು ಟಿಪ್ಪು ಹೊಂದಿದ್ದ ಅಂಶವನ್ನು ಅವನ ಕಾಲಕ್ಕೆ ಸೇರಿದ ಕನ್ನಂಬಾಡಿಯ ಪರ್ಷಿಯನ್ ಶಾಸನ ತಿಳಿಸುತ್ತದೆ.[11]

ಮೈಸೂರು ರಾಜ್ಯದಲ್ಲಿ ಪ್ರಥಮ ಬಾರಿಗೆ ಕಾವೇರಿ ನೀರಿನ ಬಳಕೆಯಿಂದ ವಿದ್ಯುತ್‌ಶಕ್ತಿ ಉತ್ಪಾದಿಸಲು ಶಿವನಸಮುದ್ರದ ಬಳಿ 1902ರಲ್ಲಿ ವಿದ್ಯುಶ್ಶಕ್ತಿ ಉತ್ಪಾದನಾ ಕಾರ್ಯಾಗಾರ ನಿರ್ಮಿಸಲಾಯಿತು. ನಂತರದ ದಿನಗಳಲ್ಲಿ ಅದರಲ್ಲೂ ಬೇಸಿಗೆಯಲ್ಲಿ ಸಾಕಷ್ಟು ನೀರಿನ ಒಳಹರಿವು ಇಲ್ಲದ ಕಾರಣದಿಂದಾಗಿ ವಿದ್ಯುತ್ ಉತ್ಪಾದನಾ ಸರಬರಾಜಿಗೆ ಬಹಳ ಕಷ್ಟವಾಯಿತು. ಇದರ ಪರಿಣಾಮವಾಗಿ ಅಧಿಕಾರಿಗಳು ಕಾವೇರಿ ನದಿಗೆ ಅಣೆಕಟ್ಟೆ ನಿರ್ಮಾಣ ಮಾಡುವುದು

ಸೂಕ್ತವೆಂದು ಭಾವಿಸಿದರು. ಆಗ ಡೆಪ್ಯುಟಿ ಚೀಫ್ ಇಂಜಿನಿಯರ್ ಆಗಿದ್ದಂತಹ ಕ್ಯಾಪ್ಟನ್ ಡೌಸ್ ಕನ್ನಂಬಾಡಿ (ಶ್ರೀರಂಗಪಟ್ಟಣಕ್ಕೆ 14.5 ಕಿ.ಮಿ. ಮತ್ತು ಮೈಸೂರಿಗೆ 19 ಕಿ.ಮಿ ದೂರ) ಬಳಿ ಅಣೆಕಟ್ಟು ನಿರ್ಮಾಣ ಮಾಡುವ ಬಗ್ಗೆ ಅಂದಾಜು ನಕ್ಷೆಯನ್ನು ತಯಾರಿಸಿದ್ದರು. ಇದರ ಅಂದಾಜು ನಕ್ಷೆ ಕಾರ್ಯರೂಪಕ್ಕೆ ಬರುವ ಮೊದಲೇ ಅವರು ಅಪಘಾತಕ್ಕೆ ತುತ್ತಾದರು.[12]

1909ರಲ್ಲಿ ಮೈಸೂರು ರಾಜ್ಯದ ಮುಖ್ಯ ಇಂಜಿನಿಯರ್ ಆಗಿ ಅಧಿಕಾರ ಸ್ವೀಕಾರ ಮಾಡಿ ವಿಶ್ವೇಶ್ವರಯ್ಯನವರು ಆ ಯೋಜನೆಯನ್ನು ಕೈಗೆತ್ತಿಕೊಂಡರು. ಇವರು ವಿದ್ಯುತ್ ಉತ್ಪಾದನೆ ಜೊತೆಗೆ ನೀರಾವರಿ ಸೌಲಭ್ಯವನ್ನು ವಿಸ್ತರಿಸುವ ಯೋಜನೆಯ ಬಗ್ಗೆ 1911ರ ಮೇ 15ರಂದು ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸಿದರು. 1911ರಲ್ಲಿಯೇ ಅಣೆಕಟ್ಟು ನಿರ್ಮಾಣ ಮಾಡುವ ಸ್ಥಳದ ಬಗೆಗೆ ವಿಶೇಷ ಪರಿಶೀಲನೆ ಕೈಗೊಂಡು ಅಣೆಕಟ್ಟಿನ ಬಗ್ಗೆ ವರದಿ ತಯಾರಿಸಿ ಅಮೆಕಟ್ಟಿನ ಕಟ್ಟಡವನ್ನು ಎರಡು ಹಂತಗಳಲ್ಲಿ ನಿರ್ಮಿಸಲು ನಿರ್ಧಾರಿಸಿದರು. ಕೃಷ್ಣರಾಜಸಾಗರಕ್ಕೆ ಮೊದಲು ಈ ಹೆಸರು ಇರಲಿಲ್ಲ. ಮೊದಲಿನ ಹೆಸರು ಕನ್ನಂಬಾಡಿ. ಈಗಲೂ ಈ ಹೆಸರು ಪ್ರಚಲಿತದಲ್ಲಿಯೇ ಇದೆ. ವಿಶ್ವೇಶ್ವರಯ್ಯನವರು ವರದಿ ಸಲ್ಲಿಸುವಾಗ ಅದಕ್ಕೆ ಕನ್ನಂಬಾಡಿ ಜಲಾಶಯದ ಯೋಜನೆ ಎಂದೇ ಹೆಸರಿತ್ತು.[13] ಅಣೆಕಟ್ಟಿನ ಮೊದಲ ಹಂತದ ಕಟ್ಟಡವು ವಿದ್ಯುತ್ ಉತ್ಪಾದನೆಗಾಗಿ ನದಿಮಟ್ಟದಿಂದ 80 ಅಡಿ ನಿರ್ಮಿಸಲು, ಎರಡನೇ ಹಂತದಲ್ಲಿ 118 ಅಡಿ ಎತ್ತರದ ಅಣೆಕಟ್ಟನ್ನು ವಿದ್ಯುತ್ ಮತ್ತು ನೀರಾವರಿ ಉದ್ದೇಶಕ್ಕಾಗಿ ಕಟ್ಟುವ ಯೋಜನೆ ಹೊಂದಿದ್ದರು ಈ ಅಣೆಕಟ್ಟಿನ ಉದ್ದೇಶ :

1. ಶಿವನಸಮುದ್ರದ ವಿದ್ಯುತ್ ಕಾರ್ಯಗಾರಕ್ಕೆ ನಿರಂತರವಾಗಿ ಯಾವ ಅಡೆತಡೆ ಇಲ್ಲದೆ ನೀರು ಸರಬರಾಜು ಮಾಡುವುದು.

2.. ವಿದ್ಯುಚ್ಛಕ್ತಿಯ ಸಹಾಯದಿಂದ ಗಣಿಗಾರಿಕೆ ಮತ್ತು ಕೈಗಾರಿಕೆಗಳಿಗೆ ಆದ್ಯತೆ ನೀಡುವುದು.

3. ಕ್ಷಾಮ ಮತ್ತು ಬರಗಾಲಕ್ಕೆ ತುತ್ತಾದಂತಹ ಪ್ರದೇಶಗಳನ್ನು ನೀರು ಸರಬರಾಜಿನ ಮೂಲಕ ನೀರಾವರಿ ಭೂಮಿಯಾಗಿ ಪರಿವರ್ತನೆ ಮಾಡುವುದು.[14]

ನದಿಮಟ್ಟದಿಂದ 80 ಅಡಿ ಎತ್ತರದ ಅಣೆಕಟ್ಟು ನಿರ್ಮಾಣದ ಮೊದಲ ಹಂತದ ಕೆಲಸ 1911 ರಲ್ಲಿ ಪ್ರಾರಂಭಗೊಂಡು 1915ರ ವೇಳೆಗೆ ಪೂರ್ಣವಾಗಿ ವ್ಯವಸ್ಥಿತ ರೀತಿಯಲ್ಲಿ ಕೃಷಿಗೆ ನೀರನ್ನು ಸರಬರಾಜು ಮಾಡಲಾಯಿತು.[15] ಎರಡನೇ ಹಂತದ ಅಣೆಕಟ್ಟು ನಿರ್ಮಾಣ ಕಾರ್ಯವನ್ನು ಮೈಸೂರು ಮತ್ತು ಮದ್ರಾಸ್ ಸರ್ಕಾರಗಳ ನಡುವೆ ಉಂಟಾದ ಸಂಘರ್ಷದಿಂದಾಗಿ ಕೈಗೆತ್ತಿಕೊಳ್ಳಲಿಲ್ಲ 1924ರಲ್ಲಿ ಮದ್ರಾಸ್ ಸರ್ಕಾರ ಮತ್ತು ಮೈಸೂರು ರಾಜ್ಯಗಳ ನಡುವೆ ಒಪ್ಪಂದ ಏರ್ಪಟ್ಟಿತು.

ಈ ಒಪ್ಪಂದದ ಬಳಿಕ ಎರಡನೇ ಹಂತದ ಅಣೆಕಟ್ಟಿನ ನಿರ್ಮಾಣವನ್ನು 124.8 ಅಡಿ ಎತ್ತರದವರೆಗೂ ನಿರ್ಮಾಣ ಮಾಡಲಾಯಿತು. ಈ ಕಾರ್ಯವನ್ನು 1931ರಲ್ಲಿ ಕೊನೆಗೊಳಿಸಲಾಯಿತು. ಮೈಸೂರಿನ ದೊರೆ ಪ್ರಜಾವತ್ಸಲ ನಾಲ್ವಡಿ ಕೃಷ್ಣರಾಜ ಒಡೆಯರ್ ಗೌರವಾರ್ಥ ಕನ್ನಂಬಾಡಿಗೆ ಕೃಷ್ಣರಾಜ ಸಾಗರ ಎಂದು ನಾಮಕರಣ ಮಾಡಲಾಯಿತು. ಈ ಅಣೆಕಟ್ಟು 8,600 ಅಡಿ ಉದ್ದ ಹಾಗೂ ನದಿ ಮಟ್ಟದಿಂದ 130 ಅಡಿ ಎತ್ತರದಷ್ಟು ಕಟ್ಟಲಾಗಿದ್ದು ಈ ಅಣೆಕಟ್ಟು 4,100 ಚ.ಮೈಲಿಯಷ್ಟು ನೀರಾವರಿ ವ್ಯಾಪ್ತಿಗೊಳಪಟ್ಟ ಪ್ರದೇಶಗಳನ್ನು ಹೊಂದಿದ್ದು ಸು. 50 ಚ ಮೈಲಿಯಷ್ಟು ನೀರಿನ ವಿಸ್ತೀರ್ಣಕೊಳ್ಳಪಟ್ಟಿದೆ. ನೀರಿನ ಸಂಗ್ರಹ ಮಟ್ಟ 124.8 ಅಡಿಯಷ್ಟು 44,827 ದಶಲಕ್ಷ ಕ್ಯುಸೆಕ್ಸ್ ಅಡಿ ಸಾಮರ್ಥ್ಯವನ್ನು ಹೊಂದಿದೆ.[16]

1921 ರಲ್ಲಿ ಮುಖ್ಯ ಚೀಫ್ ಇಂಜಿನಿಯರ್ ಆದ ಕದಂಬಿ ಅವರ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಲಾಯಿತು. ಸಮಿತಿಯು ಈ ದೊಡ್ಡ ಯೋಜನೆಯ ಬಗ್ಗೆ ಅನೇಕ ವಿಷಯಗಳಲ್ಲಿ ಸಲಹೆಗಳನ್ನು ನೀಡಬೇಕಾಗಿತ್ತು. ಎರಡನೇ ಹಂತದ ಅಣೆಕಟ್ಟಿನ ವಿಸ್ತಾರ ಎತ್ತರ ಮಟ್ಟದಲ್ಲಿ ಕಾಲುವೆಗಳ ನಿರ್ಮಾಣ ಮಾಡಬೇಕೆಂದು ಈ ಸಮಿತಿಯು ಅಭಿಪ್ರಾಯ ವ್ಯಕ್ತಪಡಿಸಿತು. 1922 ಫೆಬ್ರವರಿಯಲ್ಲಿ ನೀಡಿದ ವರದಿಯಲ್ಲಿ ಈ ಸಮಿತಿಯು ಅನೇಕ ಕಾರ್ಯಗಳನ್ನು ಕೈಗೆತ್ತಿಕೊಂಡು ರೈತರಿಗೆ ಹೆಚ್ಚಿನ ಲಾಭ ದೊರೆಯುವಂತೆ ಮಾಡಿ ರಾಜ್ಯದ ಆರ್ಥಿಕ ಅಭಿವೃದ್ಧಿಯನ್ನು ಕೈಗೊಳ್ಳಬಹುದೆಂಬುದಾಗಿ ಅಭಿಪ್ರಾಯ ಪಟ್ಟಿತು. ಈ ಉದ್ದೇಶ

ಈಡೇರಿಕೆಗಾಗಿ ನೀರಾವರಿ ವಿಸ್ತರಣೆ ಮಾಡಿ ಉತ್ತಮ ಮಟ್ಟದ ಕಾಲುವೆಗಳನ್ನು ತಕ್ಷಣವೇ ನಿರ್ಮಾಣ ಮಾಡಬೇಕೆಂಬುದಾಗಿ ತಿಳಿಸಿತು.[17]

1924ರ ಫೆಬ್ರವರಿಯಲ್ಲಿ ಮದ್ರಾಸ್ ಸರ್ಕಾರದೊಂದಿಗಿನ ಒಪ್ಪಂದದಿಂದಾಗಿ ಸರ್ಕಾರವು ಸರ್ವೇಕ್ಷಣೆ ಕೈಗೊಳ್ಳಲು 1927ರಲ್ಲಿ ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ವಿಶೇಷ ಸಮಿತಿಯೊಂದನ್ನು ರಚಿಸಿತು. ಅಲ್ಲದೇ ಈ ಸಮಿತಿ ನೀರಾವರಿಯನ್ನು ಅಭಿವೃದ್ಧಿ ಪಡಿಸಲು ಯಾವ ಯಾವ ಅಗತ್ಯ ಕ್ರಮ ಕೈಗೊಳ್ಳಬೇಕೆಂಬುದಾಗಿ ಸಲಹೆ ನೀಡಬೇಕೆಂಬುದಾಗಿ ಕೇಳಿಕೊಂಡಿತು. 1927ರ ಮೇ ತಿಂಗಳಲ್ಲಿ ಈ ಸಮಿತಿಯು ಉತ್ತರದಂಡೆಯ ಕಾಲುವೆ ನಿರ್ಮಾಣಕ್ಕಾಗಿ ಶಿಫಾರಸ್ಸು ಮಾಡಿತು. ಮೈಸೂರು ಸರ್ಕಾರವು 1927 ಜುಲೈ ತಿಂಗಳಲ್ಲಿ ಆ ಶಿಫಾರಸ್ಸನ್ನು ಸಮ್ಮತಿಸಿತು ಇದರ ಪರಿಣಾಮವಾಗಿ ಕಾಲುವೆ ನಿರ್ಮಾಣದ ಕಾರ್ಯವನ್ನು ಸೆಪ್ಟೆಂಬರ್ 1927ರಲ್ಲಿ ಪ್ರಾರಂಭಿಸಲಾಯಿತು. ಮುಖ್ಯ ಕಾಲುವೆಯನ್ನು ಅಣೆಕಟ್ಟಿನಿಂದ ಹುಲಿಕೆರೆ ಸುರಂಗದವರೆಗೆ ತಂದು ಮದ್ದೂರು ಶಾಖೆಯನ್ನು ಕೂಡ 1931ರಲ್ಲಿ ಪೂರ್ಣಗೊಳಿಸಲಾಯಿತು.[18] ಇದನ್ನು "ಇರ್ವಿನ್ ನಾಲೆ" ಎಂಬುದಾಗಿ ಕರೆಯಲಾಯಿತು. ಈಗ ಇದನ್ನು "ವಿಶ್ವೇಶ್ವರಯ್ಯ ನಾಲೆ" ಎಂಬುದಾಗಿ ಕರೆಯಲಾಗಿದೆ. ಈ ಕಾಲುವೆಗಳಲ್ಲಿ ಎರಡು ಶಾಖೆಗಳನ್ನು ನಿರ್ಮಾಣಮಾಡಿ 1,20,000 ಎಕರೆ ಭೂಮಿಗೆ ನೀರನ್ನು ಒದಗಿಸಲಾಯಿತು. ಈ ಭೂಮಿ ಬಹುತೇಕ ಮಂಡ್ಯ ಜಿಲ್ಲೆಯಲ್ಲಿದೆ.[19]

**ಅಡಿ ಟಿಪ್ಪಣಿಗಳು**

1. ಜಿಲ್ಲಾ ಅಂಕಿ ಅಂಶಗಳ ನೋಟ 2007-08, ಜಿಲ್ಲಾ ಆರ್ಥಿಕ ಮತ್ತು ಸಾಂಖ್ಯೀಕ ಇಲಾಖೆ, ಪುಟ ಸಂಖ್ಯೆ : 64-65.
2. ವಿಜಯ ಕರ್ನಾಟಕ, ಸಂಪುಟ-8, ಸಂಚಿಕೆ 219, ಜುಲೈ 20, 2008.
3. ಜಿಲ್ಲಾ ಅಂಕಿ ಅಂಶಗಳ ನೋಟ 2007-08, ಜಿಲ್ಲಾ ಆರ್ಥಿಕ ಮತ್ತು ಸಾಂಖ್ಯೀಕ ಇಲಾಖೆ, ಪುಟ ಸಂಖ್ಯೆ : 69.

4. ಟಿ.ಎ. ಪಾರ್ಥಸರಥಿ (ಸಂ)- ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ (2003) ಪುಟ-23.

5. ವಿಜಯ ಕರ್ನಾಟಕ, ಸಂಪುಟ-8, ಸಂಚಿಕೆ 219, ಜುಲೈ 20, 2008.

6. ಟಿ.ಎ. ಪಾರ್ಥಸರಥಿ (ಸಂ)- ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ (2003) ಪುಟ-197.

7. ಜಿಲ್ಲಾ ಅಂಕಿ ಅಂಶಗಳ ನೋಟ 2007-08, ಜಿಲ್ಲಾ ಆರ್ಥಿಕ ಮತ್ತು ಸಾಂಖ್ಯೀಕ ಇಲಾಖೆ, ಪುಟ ಸಂಖ್ಯೆ : 69.

8. ಎಪಿಗ್ರಾಫಿಯ ಕರ್ನಾಟಕ, ಸಂಪುಟ VI , ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1977, ಶ್ರೀರಂಗಪಟ್ಟಣ-66.

9. ಎಪಿಗ್ರಾಫಿಯ ಕರ್ನಾಟಕ, ಸಂಪುಟ VI , ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1977, ಪಾಂಡವಪುರ-19.

10. ಟಿ.ಎ. ಪಾರ್ಥಸರಥಿ (ಸಂ)- ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ (2003) ಪುಟ-223.

11. ಟಿ.ಎ. ಪಾರ್ಥಸರಥಿ (ಸಂ)- ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ (2003) ಪುಟ-223.

12. Report of the special committee constituted in May 1950 on Krishnaraja sagara Reservior (Bangalore) PP:1-2.

13. ಶೇಷ ನಾರಾಯಣ, ಕಾವೇರಿ (ಒಂದು ಚಿಮ್ಮು ಒಂದು ಹೊರಳು), ಮೈಸೂರು-2003. ಪುಟ-134.

14. Report of the special committee constituted in May 1950 on Krishnaraja sagara Reservior (Bangalore) PP:1-2.

15. Draft Report on Krishnaraja Sagar work AdHOC Committee.

16. Draft Report on Krishnaraja Sagar work AdHOC Committee.

17. Report of Special Committee 1, PP : 3-4.

18. Draft Report - n-3.

19. Proceedings of the Mysore Representative Assembly (PMRA) Dasara Session for october 1931 (Mysore 1932) P. 130.

# ಅಧ್ಯಾಯ - 3

## ಇರ್ವಿನ್ ನಾಲಾ ನಿರ್ಮಾಣ

1911 ರಲ್ಲಿ ಕನ್ನಂಬಾಡಿ ನಿರ್ಮಾಣ ಯೋಜನೆ ಆರಂಭವಾಗಿ 1915 ರಲ್ಲಿ ಮೊದಲ ಹಂತ ಪೂರ್ಣಗೊಂಡಿತಾದರೂ ಮದ್ರಾಸ್ ಸರ್ಕಾರದ ತಕರಾತಿನಿಂದಾಗಿ 1914ರವರೆಗೆ ಸ್ಥಗಿತಗೊಂಡಿತು. ಈ ಅವಧಿಯಲ್ಲಿ ಜಲಾಶಯದಲ್ಲಿ ಸಂಗ್ರಹಿತ ನೀರಿನ ಬಳಕೆ ಕುರಿತಂತೆ ಸರ್ಕಾರಕ್ಕೆ ಸಲಹೆ ನೀಡಲು ಒಂದು ಸಮಿತಿ ರಚಿಸಲಾಯಿತು.[1] ಈ ಸಮಿತಿ ಎರಡನೇ ಹಂತದ ಕಾಮಗಾರಿಗೆ ಅಗತ್ಯವಾದ ಹಣಕಾಸನ್ನು ಒದಗಿಸುವ ಬಗ್ಗೆ ಸಲಹೆ ನೀಡುವುದಲ್ಲದೆ ಈಗಾಗಲೇ ನೀಡಿದ ಬಂಡವಾಳಕ್ಕೆ ಪ್ರತಿಫಲ ಪಡೆಯುವ ಮಾರ್ಗಗಳನ್ನು, ಸೂಚಿಸಬೇಕಾದ್ದಿತು, ಅಲ್ಲದೆ ಎತ್ತರದ ನಾಲಾ ಯೋಜನೆಕುರಿತಂತೆ ಪರಿಶೀಲಿಸಿದ ಸಮಿತಿ ಇರುವ ನಾಲೆಗಳನ್ನು ವಿಸ್ತರಿಸುವ ಹಾಗೂ ಪರ್ಯಾಯ ನಾಲೆಗಳನ್ನು ನಿರ್ಮಿಸುವ ಕುರಿತಂತೆ ಸಲಹೆ ನೀಡುವುದಾಗಿತ್ತು. ಹೊಸ ನಾಲಾ ವಿಸ್ತರಣೆಯಿಂದ ಉಂಟಾಗಬಹುದಾದ ಲಾಭದಾಯಕ ಅಂಶಗಳನ್ನು ಗಮನಿಸಿ ಉತ್ತರ ದಿಕ್ಕಿಗೆ ಎತ್ತರದ ದಂಡೆ ನಾಲಾ ನಿರ್ಮಾಣಕ್ಕೆ ಶೀಘ್ರವಾಗಿ ಕಾಮಗಾರಿ ಕೈಗೊಳ್ಳಲು ಸೂಚಿಸಿತು. ಈ ಹೆಚ್ಚುವರಿ ಬಂಡವಾಳ ಹೂಡಿಕೆಗೆ ಸಂಪನ್ಮೂಲಗಳನ್ನು ಕ್ರೂಢೀಕರಿಸಲು ಮತ್ತು ಶೀಘ್ರ

ಉತ್ಪಾದನೆ ಆರಂಭಿಸಿ ಪ್ರತಿ ಫಲ ಪಡೆಯಲು ಸೂಚಿಸಿತು.[2] ನದಿ ದಡಯಿಂದ 60 ಅಡಿ ಎತ್ತರದಲ್ಲಿ ಉತ್ತರ ದಂಡೆ ನಾಲಾ ನಿರ್ಮಾಣ ಆರಂಭಗೊಳ್ಳಬೇಕು ಸುಮಾರು ಮೂವತ್ತೈದು ಕಿ.ಮೀ. ದುರ್ಗಮ ಪ್ರದೇಶದಲ್ಲಿ ಹಾದು ಕಾವೇರಿ-ಶಿಂಷಾ ಕಣಿವೆಗಳನ್ನು ಪ್ರತ್ಯೇಕಿಸುವ ಬದು ಬಳಿ ಸೇರುವಲ್ಲಿ ಪರಿಶೀಲಿಸಿ ಹುಲಿಕೆರೆ ಕೊಳವೆ ಮಾರ್ಗವನ್ನು ಮಿತವ್ಯಯ ಹಾಗೂ ಸೂಕ್ತವೆಂದು ಸೂಚಿಸಿತು.[3]

ಕಾಯ್ದಿಟ್ಟ ಹಣದಿಂದ ನಾಲಾ ನಿರ್ಮಾಣಕ್ಕೆ ಹಣ ಬಳಸುವ ಸರ್ಕಾರದ ಕ್ರಮದ ವಿರುದ್ಧ ಟೀಕಾ ಪ್ರಹಾರ ಸಹ ನಡೆಯಿತು. ಸಾರ್ವಜನಿಕ ಹಣಕಾಸು ನೀತಿಯಂತೆ ಆಯವ್ಯಯದ ಮೀಸಲು ಹಣವನ್ನು ಸಮುದಾಯ ಬಳಕೆಗೆ ಬಳಸುವುದು ಪದ್ಧತಿ ಎಂದು ಸಮರ್ಥಿಸಿಕೊಂಡಿತು. ಇದೇ ಸಮಯದಲ್ಲಿ ಪ್ರಜಾಪ್ರತಿನಿಧಿ ಸಭೆಯಲೂ ಒತ್ತಾಯದ ಧ್ವನಿ ಕೇಳಿಬಂದಿತು. ಆದರೆ ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಹಣಕಾಸು ಒದಗಿಸುವುದು ಕಷ್ಟವಾಗಿದ್ದಿತು. ನಾಲಾ ನಿರ್ಮಿಸದಿದ್ದಲ್ಲಿ ಅಣೆಕಟ್ಟಿನ ಎತ್ತರವನ್ನು ಹೆಚ್ಚಿಸುವ ಉದ್ದೇಶ ಈಡೇರುವುದಿಲ್ಲ. ಅಷ್ಟೊಂದು ನೀರಿನ ಸಂಗ್ರಹ ಇದ್ದರೂ ಸಹ ನಾಲಾ ನಿರ್ಮಾಣ ಆಗದಿದ್ದರೆ ಕೇವಲ ಏಪ್ಪತ್ತು ಸಾವಿರ ಎಕರೆ ಸಾಗುವಳಿಗೆ ಅವಕಾಶವಿದ್ದಿತು.[4] ಈ ಹೆಚ್ಚುವರಿ ನೀರನ್ನು ನೀರಾವರಿಗೆ ಬಳಸಿಕೊಳ್ಳದಿದ್ದರೆ ವ್ಯರ್ಥವಾಗಿ ನದಿಗೆ ಬಿಡಬೇಕಾಗಿ ಬರಬಹುದು ಈ ಕಾರಣದಿಂದ ಮೈಸೂರು ಪ್ರಾಂತ್ಯದ ರೈತರಿಗೆ ಸಂವೃದ್ಧಿಯಾಗಿ ನೀರನ್ನು ಒದಗಿಸಲು ಎತ್ತರದ ನಾಲಾ ನಿರ್ಮಾಣ ಅಗತ್ಯವೆಂದು ಪುಟ್ಟಣ್ಣಶೆಟ್ಟರು ಪ್ರತಿಪಾದಿಸಿದರು. 1892ರ ಒಪ್ಪಂದದಂತೆ 50 ವರ್ಷಗಳಲ್ಲಿ ಮೈಸೂರು ರಾಜ್ಯ ತನ್ನ ಪಾಲಿನ ನೀರನ್ನು ಬಳಸಿಕೊಳ್ಳದಿದ್ದಲ್ಲಿ ಆ ಸವಲತ್ತು ಮೈಸೂರು ಪಾಲಿಗೆ ರದ್ದಾಗುತ್ತಿತ್ತು. ಆದುದರಿಂದ ಇರ್ವಿನ್ ನಾಲಾ ನಿರ್ಮಾಣಕ್ಕೆ ತೀವ್ರವಾದಂತಹ ಒತ್ತಡ ಬಂದಿತು. ಬಯಲು ಸೀಮೆ ಪ್ರದೇಶದ ಪ್ರತಿನಿಧಿಯಾದ ವೆಂಕಟೇಶಯ್ಯ ಬಯಲು ಸೀಮೆಯಲ್ಲಿ ಕೆರೆಗಳ ಸ್ಥಿತಿಗತಿ ದುಸ್ಥಿತಿಯಲ್ಲಿದ್ದು ಅವುಗಳ ಪುನಶ್ಚೇತನಕ್ಕೆ ಹಣಕಾಸನ್ನು ಒದಗಿಸದೆ ಕಾವೇರಿ ಮತ್ತಿತರ ಜಲಾಶಯಗಳಿಗೆ ಆದ್ಯತೆ ನೀಡಿ ಕೆರೆ ನೀರಾವರಿ ಚೌಕಟ್ಟನ್ನು ನಿರ್ಲಕ್ಷಿಸಲಾಗುತ್ತಿದೆ ಎಂದು

ಆರೋಪಿಸಿದರು. ಮೈಸೂರಿನ ಎಂ. ವೆಂಕಟಕೃಷ್ಣಯ್ಯ ಈ ಯೋಜನೆಯ ಲಾಭದ ಬಗ್ಗೆ ಕುರಿತಂತೆ ಮಾತನಾಡುತ್ತಾ ಎರಡುವರೆ ಕೋಟಿ ಹಣ ಬೇಕಾಗಿರಲಿಲ್ಲ ಸುರಂಗಕ್ಕೆ ಕೇವಲ ಅರವತ್ತು ಲಕ್ಷ ಸಾಕಗಿದ್ದು ಉಳಿದದ್ದು ಪೂರ್ಣ ಕಾಮಗಾರಿ ಆದಾಗ ಬೇಕಾಗುತ್ತದೆ. ಕಾಮಗಾರಿ ಪೂಣಗೊಂಡಂತೆ ಪ್ರತಿ ಫಲ ಸೀಗುವ ಸಾಧ್ಯತೆಗಳಿವೆ ಎಂದು ಇರ್ವಿನ್ ನಾಲಾ ನಿರ್ಮಾಣಕ್ಕೆ ಬೆಂಬಲಿಸಿದರು.[5] 1927ರಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಕಾವೇರಿ ಜಲಾಶಯದ ಅಡಿಯಲ್ಲಿ ಕೈಗೊಳ್ಳಬೇಕಾದ ನೀರಾವರಿ ಅಭಿವೃದ್ಧಿ ಚಟುವಟಿಕೆಗಳ ಕುರಿತಂತೆ ಸಲಹೆ ನೀಡಲು ಬಂದು ಸಮಿತಿ ರಚಿಸಲಾಯಿತ್ತು. ಕಾಮಗಾರಿಗಳ ಕಾರ್ಯಯೋಜನೆ ರೂಪಿಸುವುದು ಹಾಗೂ ಅನುದಾನ ಜಾರಿಕ್ರಮಗಳನ್ನು ತಿಳಿಸುವುದು ಈ ಸಮಿತಿಯ ಜವಾಬ್ದಾರಿ ಆಗಿತ್ತು.[6] ಎಲ್ಲಾ ಸಾಧ್ಯತೆಗಳನ್ನು ಪರಿಶೀಲಿಸಿದ ನಂತರ ನದಿ ಉತ್ತರ ದಂಡೆಯ ನಾಲಾ ಸೂಕ್ತವೆಂದು ಎತ್ತರದ ನಾಲಾ ಯೋಜನೆ ಸಿದ್ಧಪಡಿಸಿತು. ಈ ಸೂಚನೆಯಂತೆ ಮೊದಲ ಹಂತದ 39 ಕಿ.ಮೀ. ಹಾದಿ ದುರ್ಗಮವಾದ ಕಾರಣ ವೆಚ್ಚದಾಯಕ, ಎರಡನೇ ಹಂತದ 9123 ಅಡಿ ಉದ್ದದ ಸುರಂಗಮಾರ್ಗ ನಿರ್ಮಾಣ ಹಾಗೂ ಮೂರನೇ ಹಂತದ ಕರಿಘಟ್ಟ ಪ್ರದೇಶದಲ್ಲಿ ನಾಲಾ ನಿರ್ಮಾಣ.[7]

ಸಮಿತಿ ಉತ್ತರದಂಡೆ ಎತ್ತರದ ನಾಲಾ ನಿರ್ಮಾಣಕ್ಕೆ ಶಿಫಾರಸ್ಸು ಮಾಡಿದ ನಂತರ ಇರ್ವಿನ್ ನಾಲಾ ನಿರ್ಮಾಣ 1927ರ ಸೆಪ್ಟೆಂಬರ್ ನಲ್ಲಿ ಆರಂಭಗೊಂಡಿತು. ಇರ್ವಿನ್ ನಾಲಾ ನಿರ್ಮಾಣದ ಅಂದಾಜು ವೆಚ್ಚ 222 ಲಕ್ಷ ಮತ್ತು ಅದರಿಂದ ನೀರಾವರಿಗೆ ಒಳಪಡಿಸಬಹುದಾದ ವಿಸ್ತೀರ್ಣ 1,20,000 ಎಕರೆಗಳು ಈ ಯೋಜನೆಯನ್ನು ಯಾವುದೇ ಸಾಲ ಎತ್ತದೆ ಲಭ್ಯವಿರುವ ಬಂಡವಾಳದಿಂದಲೇ ಪೂರೈಸಲು ನಿರ್ಧರಿಸಲಾಯಿತು. ದೊಡ್ಡ ಗುತ್ತಿಗೆದಾರರನ್ನು ಅವಲಂಭಿಸದೆ ತುಂಡು ಕಾಮಗಾರಿಗಳ ರೂಪದಲ್ಲಿ ಸಣ್ಣಪುಟ್ಟ ಗುತ್ತಿಗೆ ಪದ್ಧತಿಯಲ್ಲಿ ಅನುಷ್ಠಾನಗೊಳಿಸಲು ನಿರ್ಧಾರಿಸಲಾಯಿತ್ತು.[8] 1928ರ ವೇಳೆಗೆ ಮೊದಲನೇ ಹಂತದ ಕಾಮಗಾರಿಯಲ್ಲಿ ಶೇ. 80ರಷ್ಟು ಕಾಮಗಾರಿ ಪೂರ್ಣಗೊಂಡಿತು. ಎರಡನೇ ಹಂತದ

ಕಾಮಗಾರಿಯಲ್ಲಿ ಒಟ್ಟು 9133 ಅಡಿಗಳಲ್ಲಿ ಮಾತ್ರ ಈ ಕಾರ್ಯ 1931ರ ವೇಳೆಗೆ ಪೂರ್ಣಗೊಳ್ಳುವ ಸಂಭವ ಇದ್ದಿತು. ಮೂರನೇ ಹಂತದ ಕಾರ್ಯ ಚರಣೆ 1928ರ ನವೆಂಬರ್‌ನಲ್ಲಿ ಆರಂಭಗೊಂಡಿತ್ತು. ಮದ್ದೂರು ನಾಲಾ ಪ್ರಗತಿಯಲ್ಲಿದ್ದಿತು. ಕಾವೇರಿ ನೀರಾವರಿ ಅಭಿವೃದ್ಧಿ ಹಾಗೂ ಅನುಸರಿಸಬೇಕಾದ ಬೆಳೆ ಮತ್ತು ನೀರಾವರಿ ಪದ್ಧತಿ ಸಮಿತಿಯ ತೀವ್ರ ಪರಿಶೀಲನೆಯಲ್ಲಿ ಇದ್ದವು.[9] ಇದೇ ಸಂದರ್ಭದಲ್ಲಿ ಸರ್ಕಾರ ಲಾಭದಾಯಕ ಕೃಷಿ ಪದ್ಧತಿ ಜಾರಿಗೆ ಪೂರಕವಾಗಿ ವೈಜ್ಞಾನಿಕ ಮಣ್ಣು ಪರೀಕ್ಷಾ ಸಮೀಕ್ಷೆಯನ್ನು ಕೈಗೊಂಡಿತು. ನಂತರದ ವರ್ಷಗಳಲ್ಲಿ ಮೊದಲ ಹಂತದ ತೋಡುವಿಕೆ, ಕಟ್ಟೆ ನಿರ್ಮಾಣ, ಗಾರೆ ಮತ್ತು ಗಿಡ ಮರಗಳನ್ನು ನೆಡುವ 6.5 ಕಿ.ಮೀ. ನಷ್ಟು ಪ್ರಗತಿಯಾಯಿತು. ಎರಡನೇ ಹಂತದ ಕಾರ್ಯಚರಣೆ 8090 ಅಡಿ ಸುರಂಗ ನಿರ್ಮಾಣ ಕಾರ್ಯ ಪ್ರಗತಿ ಹೊಂದಿತು. 1931ರ ಜೂನ್ ವೇಳೆಗೆ 15,000 ಎಕರೆ ಪ್ರದೇಶಕ್ಕೆ ನೀರು ಪೂರೈಕೆಗೆ ಸಾಧ್ಯವಾಗಬಹುದಾದ ಪ್ರಗತಿಕಂಡು ಬಂದಿತು. ಮೇ 1930ರ ವೇಳೆಗೆ ಮಳೆಗಳು ಅಡ್ಡಿ ಪಡಿಸಿದವು.[10] ಆದರೆ ನಂತರದ ವರ್ಷಗಳಲ್ಲಿ ಅಣೆಕಟ್ಟು ಮತ್ತು ಸುರಂಗ ಮಾರ್ಗದ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲಾಯಿತು. ನೀರನ್ನು ಸುರಂಗದ ವರೆಗೆ ಬಿಟ್ಟು ಪರೀಕ್ಷಿಸಲಾಯಿತು. ಮದ್ದೂರು ಶಾಖಾ ನಾಲಾ ಸುಮಾರು 22,000 ಎಕರೆ ಪ್ರದೇಶಕ್ಕೆ ನೀರೂಣಿಸಲಾಯಿತು. ಕಾವೇರಿ ಶಾಖೆಗೆ ಮತ್ತು ಅಚ್ಚುಕಟ್ಟಿನ ಸುಮಾರು 74,000 ಎಕರೆಗೆ ಪೂರ್ವಭಾವಿ ಕಾಮಗಾರಿಗಳು ಆರಂಭವಾದವು. ಇರ್ವಿನ್ ನಾಲಾ ಕಾಮಗಾರಿ ಆರಂಭವಾದ ನಾಲ್ಕು ವರ್ಷಗಳಲ್ಲೇ ಅಚ್ಚುಕಟ್ಟಿಗೆ ನೀರೊದಗಿಸುವ ಕಾರ್ಯ ಆರಂಭವಾಯಿತು. ಕಾಮಗಾರಿಯ ಅನುಷ್ಠಾನದ ಹಂತದಲ್ಲಿ ಜಾರಿಗೊಂಡ ಕೆಲಸ ಕಾರ್ಯಗಳು ಮತ್ತು ಹಣಕಾಸಿನ ಪೂರೈಕೆಯಿಂದಾಗಿ ಉತ್ತಮ ಕಾರ್ಯ ಸಾಧ್ಯವಾಯಿತು.[11] ಹುಲಿಗೆರೆ ಅಡ್ಡೆಯಿಂದ ಕನ್ನಂಬಾಡಿವರೆಗೆ ಇರ್ವಿನ್ ನಾಲಾ ಅಡಿಯಲ್ಲಿ ತೋಟದ ಬೆಳೆಗಳನ್ನು ಬೆಳೆಯುವ ಪ್ರಯತ್ನಗಳಾದವು. ಆದರೆ ರೈತರು ಇಂಥ ಪ್ರಯತ್ನಕ್ಕೆ ಸ್ಪಂಧಿಸಲಿಲ್ಲ. ಸರ್ಕಾರ ಅದೇ ನೀರಾವರಿ ನೀತಿಯನ್ನು, ವಂತಿಗೆ ದರಗಳನ್ನು, ನೀರಿನ ದರಗಳನ್ನು ಮದ್ದೂರು ಶಾಖಾವಲಯದ ಪ್ರಮಾಣದಲ್ಲೇ ಜಾರಿಗೊಳಿಸಿತು. ಮೊದಲನೇ ಹಂತದ ಕಾಮಗಾರಿ ಪೂರ್ಣ ಯಶಸ್ವಿ ಪಡೆಯಿತು. ಎರಡನೇ ಹಂತದ ಕಾಮಗಾರಿ ಕಷ್ಟವಾಗಿ ಪರಿಣಮಿಸಿತು.[12]

ಇರ್ವಿನ್ ನಾಲಾ ಪದ್ಧತಿಯನ್ನು ಮದ್ದೂರು, ಕೆರಗೋಡು ಹಾಗೂ ಕಾವೇರಿ ಶಾಖಾ ಬಯಲುಗಳಿಗೆ ವಿಸ್ತರಿಸಲಾಯಿತು. 1932ರ ವೇಳೆಗೆ ಈ ಭಾಗದ ಬಹುತೇಕ ರೈತರು ಸಾಗುವಳಿ ಕೈಗೊಳ್ಳಲು ಮುಚ್ಚಳಿಕೆ ಪತ್ರಗಳನ್ನು ಬರೆದು ಕೊಟ್ಟರು. ಇರ್ವಿನ್ ನಾಲಾ ತನ್ನ ಶಾಖೆಗಳನ್ನೊಳಗೊಂಡಂತೆ ಹೆಚ್ಚುವರಿಯಾಗಿ ಎರಡು ಕೋಟಿ ರೂ. ವೆಚ್ಚ ಬರುತ್ತಿತ್ತು. ಹೀಗಾಗಿ ಇರ್ವಿನ್ ನಾಲಾ ನಿರ್ಮಾಣ ಕಾರ್ಯ ವೆಚ್ಚದಾಯಕವಾಗಿ ಪರಿಣಮಿಸಿತು. ಈ ಹಿನ್ನಲೆಯಲ್ಲಿ ಸರ್ಕಾರ ರೈತರನ್ನು ಲಾಭದಾಯಕ ಬೆಳೆ ಪದ್ಧತಿಯತ್ತ ಪ್ರೋತ್ಸಾಹಿಸುವ ಕ್ರಮಗಳನ್ನು ಕೈಗೊಂಡಿತು.[13]

ಈ ಹಿನ್ನಲೆಯಲ್ಲಿ ಸರ್ ಎಂ.ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯ ಕೆ.ಆರ್.ಸಾಗರ ಕಾಮಗಾರಿಗಳ ವಿಶೇಷ ಸಮಿತಿ ಅತಿ ನೀರಾವರಿಯಿಂದ ಉಂಟಾಗಬಹುದಾದ ದುಷ್ಪರಿಣಾಮಗಳನ್ನು ತಡೆಯಲು ನಾಲಾ ಪ್ರದೇಶದಲ್ಲಿ ಬ್ಲಾಕ್ ಪದ್ಧತಿಯನ್ನು ಜಾರಿಗೊಳಿಸಲು ತೀರ್ಮಾನಿಸಿತು. ಬ್ಲಾಕ್ ಪದ್ಧತಿಗೆ ರೈತರಿಂದ, ರೈತ ಪ್ರತಿನಿಧಿಗಳಿಂದ ತೀವ್ರವಾದ ವಿರೋಧ ವ್ಯಕ್ತವಾಯಿತು. ಹೆಚ್.ಸಿ. ದಾಸಪ್ಪ, ಚಲುವಯ್ಯ ಮುತ್ತಿತರರು ಬ್ಲಾಕ್ ಪದ್ಧತಿಯ ಅನಾನುಕೂಲತೆಗಳನ್ನು ಪ್ರಧಾನವಾಗಿ ಉಲ್ಲೇಖಿಸುವ ಮೂಲಕ ಪ್ರಬಲ ವಿರೋಧ ವ್ಯಕ್ತಪಡಿಸಿದರು.[14]

ಈ ನಾಲಾ ಪ್ರದೇಶದಲ್ಲಿ ಅನುಸರಿಸಬೇಕಾದ ನೀರಾವರಿ ವಿಧಾನ, ವಂತಿಗೆ ಪ್ರಮಾಣ ನೀರಾವರಿ ತೆರಿಗೆ ಮತ್ತಿತರ ವಿಷಯಗಳನ್ನು ಕುರಿತಂತೆ ಸಮಿತಿ ಕೆಳಕಂಡ ಶಿಫಾರಸ್ಸುಗಳನ್ನು ಮಾಡಿತು.

1. ಮಣ್ಣಿನ ಸರ್ವೇಕ್ಷಣೆಯ ಆಧಾರದಲ್ಲಿ ಸಾಧಾರಣ ಭೂಮಿಗಳಲ್ಲಿ ದರವನ್ನು ಪ್ರತಿ ಎಕರೆಗೆ 90 ರೂ.ಗಳಂತೆ ಮತ್ತು ಉತ್ತಮ ಭೂಮಿಯಲ್ಲಿ ಎಕರೆಗೆ 120ರೂನಂತೆ ವಂತಿಕೆ ಪ್ರಮಾಣ ನಿರ್ಧರಿಸಿತು.

2. ಈ ವಂತಿಕೆಯನ್ನು ವಾರ್ಷಿಕ ಹತ್ತು ಸಮಾನ ಕಂತುಗಳಲ್ಲಿ ವಸೂಲಿ ಮಾಡುವುದಾಗಿತ್ತು.

3. ಬಾಕಿ ಹಣದ ಮೇಲೆ ಶೇ. 6.25ರಷ್ಟು ಬಡ್ಡಿ.

4. ನೀರು ಲಭ್ಯವಾದ ವರ್ಷದ ಒಳಗೆ ಹಣ ಪಾವತಿ ಮಾಡಿದವರಿಗೆ ಶೇ. 5ರ ರಿಯಾಯ್ತಿ ಸೌಲಭ್ಯ ಕಲ್ಪಿಸಿತು.[15]

ಸರ್ಕಾರ ಈ ದರ ನಿಗಧಿ ಕಡಿಮೆ ಎಂದು ಭಾವಿಸಿ ಕನಿಷ್ಠ ಎಕರೆಗೆ ನೂರು ರೂ. ಮತ್ತು ಗರಿಷ್ಟ ಎಕರೆಗೆ ನೂರೈವತ್ತು ರೂ.ಗಳಂತೆ ನಿಗಧಿ ಮಾಡಿತು. ಬೆಳೆ ಆವರ್ತನ ಪದ್ಧತಿಯನ್ನು ಜಾರಿಗೊಳಿಸಿ ಕಬ್ಬು ಮತ್ತಿತರ ವಾಣಿಜ್ಯ ಬೆಳೆಗಳನ್ನು ಪ್ರೋತ್ಸಾಹಿಸಲು ನಿರ್ಧರಿಸಲಾಯಿತು. ಈ ಹಿನ್ನಲೆಯಲ್ಲಿ ಸರ್ಕಾರ ಹೇರಿದ ಷರತ್ತು ಮತ್ತು ನಿಯಮಾವಳಿಗಳನ್ನು ಸಹಜವಾಗಿ ವಿರೋಧಿಸಿದ ರೈತ ಸಮುದಾಯ ತಮ್ಮ ಅಸಮಧಾನ ಮತ್ತು ಅತೃಪ್ತಿಯನ್ನು ಹೆಚ್ಚಿಸಿಕೊಳ್ಳಲಾರಂಭಿಸಿತು. ಈ ನಿಟ್ಟಿನಲ್ಲಿ ತಮ್ಮದೇ ಸಂಘಟನೆಯನ್ನು ರೂಪಿಸಿಕೊಂಡು ಪ್ರಭುತ್ವದೊಂದಿಗೆ ಮನವಿ ರೂಪದ ಕ್ರಿಯಾ ಚಟುವಟಿಕೆಗಳನ್ನು ತೊಡಗಿಸಿಕೊಂಡಿತು. [16]

**ಅಡಿ ಟಿಪ್ಪಣಿಗಳು**

1. Proceedings of the Government of the Highness the Maharaja of Mysore. ( Hereafter the source will be cited as PGM) G.O No. PW 205-216, KRS - 226-237 Dated 07-06-1921.

2. Laying down the future policy regarding the KRS and other works. G.O. No. 115-126, KRS 723-724. Dated 1-09-1924. P-3

3. Laying down the future policy regarding the KRS and other works. G.O. No. 115-126, KRS 723-724. Dated 1-09-1924. P-29

4. Proceedings of the Mysore Legislative Coucil Debates (This source will be cited as PMLC) June 1926, P-177.

5. Proceedings of the Mysore Legislative Coucil Debates (This source will be cited as PMLC) June 1926, P-212.

6. PGM . G.O No. 27-34, KRS - 94-101 Dated : 9-07-1926.

7. Report of the committee appointed by government for the development of Irrigation under the KRS-May 1927, P-3.

8. PMLC, March 1928, P-99.

9. Administraive report of the KRS and allied works (Hereafter the source will be citted as ARKRS & AW) 1928-29, P-2.

10. ARKRS & AW, 1929-30, P-9.

11. ARKRS & AW, 1930-31, P-2.

12. ARKRS & AW, 1930-31, P-8.

13. K.S. Vijayalakshmi, unpublised Thesis submitted to Bangalore university "Irrigation policy in Princly Mysore", P-186.

14. PMRA. 1931, P-291.

15. PGM, G.O. No. C 93-120,KRS-570-597 Dated 8-06-1931. Laying down the policy of Irrigation to be adopted and other Matters connected with the development of Irrigation under the Irwin canal.

16. Vijayalakshmi K.S., unpublised Thesis submitted to Bangalore university "Irrigation policy in Princly Mysore", P-191.

# ಅಧ್ಯಾಯ - 4

## ರೈತ ಹೋರಾಟ ಮತ್ತು ಸಂಘರ್ಷದ ನೆಲೆ-ತಾತ್ವಿಕ ಹಿನ್ನೆಲೆ

ಭೂಮಿಯನ್ನು ಉತ್ತಿ ಬಿತ್ತಿ ಬೆಳೆ ತೆಗೆಯುವ ಕಾಯಕವೇ ಬೇಸಾಯ. ಇದು ಮನುಷ್ಯನ ಹೊಟ್ಟೆಗೆ ತುತ್ತು ಕೊಡುವ ಒಂದು ಮುಖ್ಯ ಮಾಧ್ಯಮ. ಮಾನವನು ಬೇಸಾಯದಲ್ಲಿ ಸುಮಾರು 15 ಸಾವಿರ ವರ್ಷಗಳ ಈಚೆಗೆ ತೊಡಗಿಕೊಂಡ ಎಂದು ವಿದ್ವಾಂಸರು ಆಧಾರ ಸಹಿತ ಹೇಳುತ್ತಾರೆ.[1] ಅದರಲ್ಲೂ ಹೆಣ್ಣೇ ವ್ಯವಸಾಯದ ತಾಯಿ ಎಂಬ ಮಾತಿದೆ. ಸ್ತ್ರೀಯರು ನೆಲಸಂಬಂಧಿ ಕೆಲಸಗಳಲ್ಲಿ ತೊಡಗಿದ್ದ ಮೊದಲಿಗರಾಗಿದ್ದ ಕಾರಣ, ಅವರೇ ಅತ್ಯಂತ ಪ್ರಾಚೀನ ರೈತರು ಎಂದು ಲೌಟೆ ಎಂಬ ವಿದ್ವಾಂಸ ಹೇಳಿದ್ದಾನೆ. ಬೀಲ್ಸ್ ಮತ್ತು ಹೋಯ್ಜರ್ ಅವರು ಹೆಣ್ಣೇ ಮೊದಲು ಬೇಸಾಯಗಾರ್ತಿ ಎಂದಿದ್ದಾರೆ. ಅಂತೇ ಜಗತ್ತಿಗೆ ಮೊದಲ ತುತ್ತನ್ನು ಅಹಿಂಸಾತ್ಮಕವಾಗಿ ಕೊಟ್ಟಾಕೆ ಹೆಣ್ಣು!.

ಸಿಂಧೂ ಸಂಸ್ಕೃತಿಗೆ ಮುನ್ನವೂ ಭಾರತದಲ್ಲಿ ಕೃಷಿ ಪದ್ದತಿಯ ಒಂದು ರೂಪ ಚಾಲ್ತಿಗಿತ್ತು. ಒಕ್ಕಲುತನದಿಂದ ರೈತ ಸಮುದಾಯವು ಜೀವಿಸುವ ಒಂದು ಶಾಸ್ತ್ರೀಯ ಸಂಸ್ಕೃತಿ ಸಿಂಧೂ

ಸಂಸ್ಕೃತಿಯ ಕಾಲಕ್ಕೆ ರೂಪುಗೊಂಡಿತ್ತು ಜನಪದ ನೆಲೆಯಲ್ಲಿ ಅದು ವಿಕಸನಗೊಂಡು ಬಂದಿತು. ಕ್ರಮೇಣ ಕೃಷಿಗಾಧಾರವಾದ ಗೋಸಂಪತ್ತಿನ ಅಪಹರಣವನ್ನು ತಡೆಯುವ ಹಿನ್ನೆಲೆಯಲ್ಲಿ ಮೊದಲು ರೈತ ಪ್ರತಿಭಟನೆಯ ಉದಾಹಣೆಯನ್ನು ಕಾಣಬಹುದು.[2]

ಭಾರತದ ವ್ಯವಸಾಯದ ಆರಂಭ ಕಾಲದಲ್ಲಿ ಹೆಣ್ಣು ಮೊದಲಿನ ಕೃಷಿ ಕಾಯಕದ ವಾರಸುದಾರಳಾಗಿ ಆರ್ಥಿಕ ಶಕ್ತಿಯೂ ಅವಳಲ್ಲಿದ್ದಂತೆ ತೋರುತ್ತದೆ. ಪುರುಷನು ಬೇಟೆ ಮಾಡುವುದೇ ಶೌರ್ಯದ ಕೆಲಸ, ನೆಲದೊಳಗಿನ ಗೆಡ್ಡೆಗೆಣಸುಗಳನ್ನು ಆಯುವುದು ಹೀನಾಯದ ಕೆಲಸ ಎಂದು ಆಕೆಯ ಪಾಲಿಗೆ ಬಿಟ್ಟನು, ಹೀಗಾದ ಕಾರಣವೇ ಆಕೆಗೆ ಭೂಮಿಯಲ್ಲಿ ಮೂಲ ಆರ್ಥಿಕ ಸಂಪತ್ತಿನ ಮಾಧ್ಯಮದ ಶೋಧನೆಗೆ ಅನುವಾಯಿತು. ತುತ್ತು ತುಂಬಿಸುವ ಬೆಳೆಯೊಂದರ ಆವಿಷ್ಕಾರಕ್ಕೆ ನಾಂದಿಯಾಯಿತು. ಹೆಣ್ಣು ಗಳಿಸಿಕೊಂಡ ಮಹತ್ವ ಹಾಗೂ ಆರ್ಥಿಕ ರೂಪದ ಶಕ್ತಿಕಂಡ ಗಂಡು ಕೃಷಿಯನ್ನು ತನ್ನ ಅಂಕೆಗೆ ತೆಗೆದುಕೊಳ್ಳಲು ಆರಂಭಿಸಿರಬೇಕು. ಮಾತೃಪ್ರಧಾನ ವ್ಯವಸ್ಥೆಯು ಪಿತೃಪ್ರಧಾನ ವ್ಯವಸ್ಥೆಗೆ ತಿರುಗುವ ಹಂತದಲ್ಲಿ ಇಂಥ ಅಧಿಕಾರಗಳಿಕೆಗೆ ಹೋರಾಟ ನಡೆದಿರುವಂತಿದೆ. ಈ ಸಂದರ್ಭದಲ್ಲಿ ಆಕೆ ಗಂಡಿನ ಪ್ರಾಕೃತಿಕ ದೈಹಿಕ ಬಲದೆದುರು ಶರಣಾಗಿಯೋ, ರಾಜಿಯಾಗಿಯೋ, ಅಧಿಕಾರ ಕಳೆದುಕೊಂಡಿರಬೇಕು. ಕೃಷಿ ಕಾರ್ಯದ ಒಂದು ಭಾಗವಂತು ಇಂದಿಗೂ ಅವಳ ಕೌಶಲ್ಯಕ್ಕೆ ಮೀಸಲಾಗಿದೆ. ಹೀಗಾಗಿ ಮೊದಲ ರೈತ ಪ್ರತಿಭಟನೆ ಹಾಗೂ ರಾಜಿ ಪರಿಹಾರ ಸೂತ್ರ ಹೆಣ್ಣಿನದೇ ಆಗಿದ್ದಿರಬೇಕೆನಿಸುತ್ತದೆ.

ಕಾಲನಂತರ ಸಮುದಾಯ ಒಡೆತನ ಬಂದಂತೆ ಗ್ರಾಮ ಜೀವನದ ಸಾಮೂಹಿಕ ಕೃಷಿ ವ್ಯವಸ್ಥೆ ಮೂಡಿ ಬಂತು. ಅವಿಭಕ್ತ ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಕೃಷಿ ಕಾರ್ಯದಲ್ಲಿ ಪಾಲುದಾರರೇ ಆಗಿದ್ದರು. ಕುಟುಂಬಗಳು ವಿಭಕ್ತಗೊಳ್ಳ ತೊಡಗಿದಾಗ ಆಸ್ತಿ ವೈಯಕ್ತಿಕದ ಕಲ್ಪನೆ, ಜಮೀನನ ಹಂಚಿಕೆ, ಕುಟುಂಬದ ಸದಸ್ಯರ ನಡುವೆ ಆರಂಭವಾಯಿತು. ಕ್ರಮೇಣ ದುಡಿವ

ಕೈಗಳು ಕಡಿಮೆಯಾದಂತೆ ಕೃಷಿ ಕೆಲಸದಲ್ಲಿ ಸೋಮಾರಿತನ ಪ್ರವೇಶವಾದಂತೆ, ಮಾಲೀಕತ್ವಕ್ಕಾಗಿ ಉಪಾಯಗಳನ್ನು ರೂಪಿಸಿಕೊಂಡರು. ಇದು ಬೆಳೆದಂತೆ ಒಕ್ಕಲುತನ ಮಾಡುವವ ಒಕ್ಕಲುತನ ದುಡಿಸಿಕೊಳ್ಳುವವ ಎಂಬ ವಿಭಾಗಗಳು ಹುಟ್ಟಿಕೊಂಡವು. ದುಡಿಮೆಗೆ ತಕ್ಕ ಪ್ರತಿಫಲ ಕುಗ್ಗಿದಾಗಲೋ, ಮಾಲೀಕ ಅಥವಾ ಒಡೆತನ ಎಂಬ ನಿರಂಕುಶ ಅಧಿಕಾರ ಬೆಳೆದಾಗಲೋ, ಸಂಘರ್ಷ ಶುರುವಾಯಿತು. ಅದಕ್ಕೆ ಅಡ್ಡಿ ಆತಂಕಗಳು ಆಗುತ್ತಲೇ ಬಂದಾಗ ಪ್ರತಿಭಟನೆ, ಹೋರಾಟ ಸಂಘರ್ಷಗಳು ಬೆಳೆದವು, ಫಲ, ಪರಿಹಾರ ಪಡೆಯುವ ಸಲುವಾಗಿ ಸಂಘಟನೆ, ಬಂಡಾಯ, ಕ್ರಾಂತಿ, ಚಳವಳಿ ಸ್ವರೂಪಗಳು ಮೈತಳೆದವು. ಆತ್ಮೀಯ ಭಾವನೆಗಳು ಸೂರಗಿ ಯಾಂತ್ರಿಕ ಶ್ರೇಣಿಯಂತೆ ರೈತ- ಭೂಮಾಲೀಕ ಶ್ರೇಣಿಗಳು ಕಾಣಿಸಿಕೊಡವು.[3]

ಕೃಷಿ ಕಾರ್ಯ ಪರಂಪರೆಯನ್ನು "ರೈತ ಸತ್ಯಾಗ್ರಹ", "ಚಳವಳಿ" ಎಂಬ ಶಬ್ಧಗಳನ್ನು ಆಧುನಿಕ ಮೌಲ್ಯ ಮಾಪನಕ್ಕೆ ಮೀಸಲಿರಿಸಿದರೆ "ಪಂಥೀಯ" ಅಥವಾ "ವರ್ಗೀಯ" ಎಂಬ ಕಲ್ಪನೆಗೆ ಮಿತಿಗೊಳಿಸಿದಂತಾಗುತ್ತದೆ. ಇವನ್ನೆಲ್ಲಾ ಆಯಾ ಕಾಲದ ಬದುಕು ಹಾಗೂ ಮೌಲ್ಯಗಳ ಹಿನ್ನೆಲೆಯಲ್ಲಿ ಅರ್ಥೈಸಬೇಕಾಗುತ್ತದೆ. ಅಂದಿನ ಪರಿಭಾಷೆಯ ಅರ್ಥದ ಬೆಳಕಿನಲ್ಲಿ ನೋಡಬೇಕು. ಸಮಕಾಲೀನ ನಿಲುವುಗಳು ಪರಂಪರೆಯ ನೆಲೆಯೋ, ಸಾಂಸ್ಕೃತಿಕ ಒತ್ತಡಗಳೋ, ಅಂದಿನ ಮಾನದಂಡಗಳಾಗಿರಬಹುದು. ಪ್ರಾಚೀನ ರೈತ ಸಮುದಾಯದ ಪ್ರಭಟನಾ ಸ್ವರೂಪ ಇಂದಿನ ರೈತರ ಸಮುದಾಯದ ಹೋರಾಟ, ಚಳವಳಿ ಬಂಡಾಯದ ಸ್ವರೂಪದ್ದಾಗಿರಲಿಲ್ಲ. ಅದು ಅಂದಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ರಾಜಕೀಯ ಮೌಲ್ಯ ವ್ಯವಸ್ಥೆಯನ್ನು ಅವಲಂಬಿಸಿತ್ತೆನ್ನಬಹುದು.[4]

ಜಗತ್ತಿನಲ್ಲಿ ಮಾರ್ಕ್ಸ್ - ಲೆನಿನ್-ಮಾವೋ ಸಿದ್ಧಾಂತಗಳ ಬೆಳಕಿನಲ್ಲಿ ರೈತ ಕಾರ್ಮಿಕರು ಹಾಗೂ ಭೂ ಮಾಲೀಕರು ಇವರ ನಡುವಣ ಸಂಘರ್ಷಗಳು "ಬಂಡಾಯ", "ಕ್ರಾಂತಿ" ಎಂಬ ರೂಪಗಳಲ್ಲಿ ವ್ಯಕ್ತಗೊಂಡವು ಭಾರತದಲ್ಲೂ ಈ ಸಿದ್ಧಾಂತಗಳ ಚಾಲನೆಯ ಪೂರ್ವದಲ್ಲಿಯೂ

ರೈತ ದುಗುಡ ದೂರುಗಳು ಇಂದಿನ ಪರಿಭಾಷೆಗಳ ಪರ್ಯಾಯಾ ಅರ್ಥದ ರೂಪದಲ್ಲಿ ಕಾಣಿಸಿಕೊಂಡಿದ್ದುಂಟು. ಭಾರತೀಯ ರೈತ ಹೋರಾಟಗಳ ಮಧ್ಯಯುಗೋತ್ತರದ ಕೆಲ ಉದಾಹರಣೆಗಳನ್ನು ಗಮನಿಸಿದರೆ, ಕರ್ನಾಟಕದ ರೈತ ಹೋರಾಟಗಳ ಹಾಗೂ ಜನಪ್ರತಿನಿಧಿ ಶಾಸಕರ ಆಡಳಿತಸ್ಥರ ನಡುವಣ ಕ್ರಿಯೆ, ಪ್ರತಿಕ್ರಿಯೆ, ಪರಿಹಾರಗಳ ಅರ್ಥೈಸುವಿಕೆಗೆ ಸಹಕಾರಿ ಆಗುತ್ತದೆ. ಈ ರೈತ ಚಳವಳಿಗೆ ಜಾತಿಯ ಒಕ್ಕೂಟದ ಹಿನ್ನೆಲೆ, ಧಾರ್ಮಿಕ ಪಂಥಗಳ ನೆಲೆಗಳೂ ಕಾಣಬರುತ್ತದೆ. ಅವುಗಳಲ್ಲಿ ಕೆಲವು ಆರ್ಥಿಕ ಕಾರಣಗಳಿಗಾಗಿ ಸ್ವಾತಂತ್ರ್ಯ ಹೋರಾಟದ ಅಂಗವಾಗಿ ನಡೆದರೆ, ಕೆಲವು ಶೋಷಣೆಯ ವಿಪರೀತದ ಪರಿಣಾಮದ್ದಾಗಿವೆ. ಇನ್ನೂ ಕೆಲವು ಭೂ ಮಾಲೀಕ ವರ್ಗದ ಅತಿ ಲಾಭಕೋರತನ, ಸವಲತ್ತಿನ ದುರುಪಯೋಗ, ಅಮಾನವೀಯ ಭೋಗಗಳ ಕಾರಣಗಳಿಂದಾಗಿವೆ. ಮತ್ತೆ ಕೆಲವು ಸಾಂಸ್ಕೃತಿಕ ವೈರುಧ್ಯಗಳಿಂದಾಗಿವೆ. ಅನುಕೂಲಸ್ಥ ರೈತರಾಗಲಿ, ಸಾಮಾನ್ಯ ಕೃಷಿ ಕೂಲಿಗಾರರಾಗಲಿ ವರ್ಗ ಪ್ರಜ್ಞೆಯ ನೆಲೆಯ ಕ್ರಾಂತಿಸಾಧಕರಲ್ಲ. ಮಧ್ಯಮ ವರ್ಗದ ರೈತರು ಅವಲಬಿತರಾಗದ ಕಾರಣ ಧಣಿ ಜನರ ಎದುರಾಗಿ ನಿಲ್ಲಬಲ್ಲರು. ಆದರೆ ಭಾರತೀಯ ಜಾತಿ ಪದ್ಧತಿ ಧಾರ್ಮಿಕ ಪ್ರಭಾವ, ನೈತಿಕ ವಿಧೇಯತೆಯ ಕಾರಣ ಹಾಗೂ ತಮಗೆ ಅನ್ಯಾಯದ ತೀರ ಮೊನಚಾದ ಹೊರತು ಶೋಷಣೆ ವಿರುದ್ಧ ಈ ರೈತರು ಎದುರು ಬೆಳದಿರುವ ಸಂದರ್ಭಗಳೂ ಇವೆ ಕೊನೆಯ ಗಳಿಗೆಯವರೆಗೂ ಕಾದು ನೋಡುವ ಸಂಯಮ ಇವರದು.[5] ಪ್ರಾಂಯುಫೆನೂನನು, ವಸಾಹತು ದೇಶಗಳಲ್ಲಿ ಕ್ರಾಂತಿಗೆ ಸಾಧ್ಯತೆಗೊಳಿಸುವವರು ರೈತರು ಮಾತ್ರ, ಅವರೇ ಅದರ ರೂವಾರಿಗಳು ಎಂದು ಹೇಳಿದನು. ಭಾರತ ವಸಹಾತು ರಾಷ್ಟ್ರವಾಗಿ ಇಂತಹ ಸಾಧ್ಯತೆಗಳನ್ನು ಹೊಂದಿತ್ತು ನಿಜ.[6] ಆದರೆ ಇದು ಹೆಚ್ಚು ಅಭಿವ್ಯಕ್ತವಾದದ್ದು ಬ್ರಿಟಿಷ್ ಆಳ್ವಿಕೆ ಹಾಗೂ ನಂತರದ ಕಾಲದಲ್ಲಿ ಎಂಬುದು ಅಷ್ಟೇ ಸತ್ಯವಾದುದು.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ಕರ್ನಾಟಕದ ರೈತ ಹೋರಾಟಗಳು ತಮಿಳುನಾಡಿನ ರೈತಹೋರಾಟಗಳಿಂದ ತಾತ್ವಿಕವಾಗಿ, ತಾಂತ್ರಿಕವಾಗಿ ಪ್ರಭಾವಿತವಾಗಿವೆ. ಭಾರತೀಯ ಶಕ್ತಿಕೂಟದಲ್ಲಿ ರೈತನ ಶಕ್ತಿಸ್ಥಾನವನ್ನು ಗಮನಿಸಿ ಹೇಳಿದರೆ ಶೋಷಣೆ ಶಕ್ತಿಕೂಟವಾದ ಜಮೀನ್ದಾರ, ಸಾಹುಕಾರ ಆಳುವ ವರ್ಗದ ಶೋಷಣೆ ವಿರುದ್ಧ ಸಂಘಟಿತರಾಗಿ ನಡೆಸುವ ನಡೆಸಿದ

ಪ್ರಗತಿಪರ ಹೋರಾಟದ ನೆಲೆಯೇ ರೈತ ಶಕ್ತಿಯ ನೆಲೆ ಎಂದು ಗುರುತಿಸಿರುವುದಿದೆ.[7] ಇಲ್ಲಿ ಜಾತಿ ವ್ಯವಸ್ಥೆಯ ಪರಯರಾಗತ ಕಾರಣಗಳು, ಆರ್ಥಿಕ ಕಾರಣ, ಬಡತನ, ಅವಿದ್ಯೆ, ಅಜ್ಞಾನ ಇತ್ಯಾದಿ ಕಾರಣಗಳು ಸಾಮಾಜಿಕ ನೆಲೆಯಲ್ಲಿ ಕಾಣುತ್ತವೆ. ಇದೆಲ್ಲ ಆಧುನಿಕ ಪರಿಕಲ್ಪನೆಯಲ್ಲಿ ವಿಸ್ತಾರಗೊಂಡ ರೈತರ ಚಳವಳಿಯ ತಾತ್ವಿಕ ನೆಲೆಗಳಾಗಿವೆ. ಎಡಪಂಥೀಯ ನಿಲುವಿನಲ್ಲೂ ಈ ಚಳವಳಿಗಳನ್ನು ವಿಶ್ಲೇಷಿಸಿರುವುದುಂಟು. ಆದರೆ ಸಾಂಸ್ಕೃತಿಕ ನೆಲೆಯಲ್ಲಿ ಪ್ರಜಾ ಪ್ರತಿನಿಧಿಗಳ ಸಂವಾದದ ನೆಲೆಯಲ್ಲಿ ವಿಶ್ಲೆಷಣೆ ಗಾಢವಾಗಿ ನಡೆದಿರುವುದು ಕಾಣಬರುವುದಿಲ್ಲ. ಅಂತಾಗಿ 19-20ನೇ ಶತಮಾನದ ವಿಶ್ಲೇಷಣೆಗಷ್ಟೆ ಸೀಮಿತ ಮಾಡಿಕೊಂಡರೆ ಹಿಂದೆ ರಾಜರ ಕಾಲದಲ್ಲಿ ನಡೆದ ರೈತ ಪ್ರತಿಭಟನೆಯ ಮೌಲ್ಯಕ್ಕೆ ಬೆಲೆ ಸಿಗದಂತಾಗುತ್ತದೆ.

ಯಾವುದೇ ಒಂದು ಚಳವಳಿಗೆ ಹೋರಾಟಗಳ ಪ್ರಜ್ಞಾಪರಂಪರೆಯ ಮೊತ್ತವೂ ನೆಲಗಟ್ಟಾಗಿರುತ್ತದೆ. ಹೊಸರೂಪ, ಹೊಸ ಸೃಷ್ಠಿ ಎಂದು ಕೊಂಡರೂ ಹಿನ್ನೆಲೆಯ ಚಳವಳಿಗಳನ್ನಷ್ಟೆ ವೈಭವೀಕರಿಸಿ ಸುದ್ದಿ ಮಾಡಿದರೆ ತಾರತಮ್ಯ ಭಾವನೆ ಮಾಡಿದಂತೆ ಆಗುತ್ತದೆ. ಅದು ಸಮಸ್ತ ಜನವರ್ಗದ ಸಮನ್ವಯ ನೆಲೆಯಾಗದೆ ಪಂಥಿಲು ದೋಷವನ್ನು ಹೊರಬೇಕಾಗುತ್ತದೆ. ಅಲ್ಲಿಗೆ ಮಾನವ ಕುಲ ಅಥವಾ ಮನುಜ ಹಿತವೇಧರ್ಮ ಎಂಬ ಮಾತಿಗೆ, ಆಶಯಕ್ಕೆ ನೆಲೆ ಎಲ್ಲಿ ಒದಗೀತು? ಅಂತಾಗಿ ಯಾವ ಸ್ವರೂಪದ ಯಾವುದೇ ಮಟ್ಟದ ಪ್ರತಿಭಟನೆ ಆಗಿರಲಿ ಹಿಂದಿನವುಗಳನ್ನು ಗಮನಿಸಬೇಕಾಗುತ್ತದೆ ಮುಂದಿನ ತಲೆಮಾರಿಗೆ ಅವು ನೀಡಿದ ಸಂಕೇತಗಳನ್ನು ಗ್ರಹಿಸಬೇಕು. ಅಂದಿನ ಒಡೆಯ-ರೈತ: ಇಂದಿನ ಒಡೆಯ-ರೈತ ಕುರಿತ ಪರಿಕಲ್ಪನೆಗಳನ್ನು ಆಯಾ ಕಾಲದ ಸಾಂಸ್ಕೃತಿಕ ಜಾಯಮಾನದ ಮೂಲಕವೂ ಗ್ರಹಿಸಬೇಕಾಗುತ್ತದೆ.[8]

ಹಾಗಾದರೆ ರೈತ ಎಂದರೆ ಯಾರು? ರೈತ "ಕ್ರಾಂತಿ", "ಚಳವಳಿ" ಎಂದರೇನು? "ರೈತ ಸತ್ಯಾಗ್ರಹ" ಎಂದರೇನು? "ರೈತರದಂಗೆ" "ಬಂಡಾಯ" ಇವುಗಳು ಏತಕ್ಕಾಗಿ ನಡೆದವು ಎಂಬುದನ್ನು ತಿಳಿಯುವುದು ಅವಶ್ಯಕವಾಗುತ್ತದೆ. ಪ್ರತ್ಯಕ್ಷ ಬೇಸಾಯದಲ್ಲಿ ತೊಡಗಿರುವವನು

"ರೈತ" ಎಂಬ ಇಂದಿನ ಸ್ಥೂಲ ಕಲ್ಪನೆಗೂ ಪ್ರಾಚೀನ ಸಾಂಪ್ರದಾಯಿಕ ಕಲ್ಪನೆಗೂ ವ್ಯತ್ಯಾಸವಿದೆ. ಸ್ವತಃ ಒಕ್ಕಲುತನ ಮಾಡುವ ಉತ್ತಿಬಿತ್ತಿ ಬೆಳೆ ತೆಗೆಯುವ ವ್ಯಕ್ತಿ ನಿಜವಾದ ರೈತ ನೆನಿಸುತ್ತಾನೆ. ಅನುಭವದಾರ ಎನಿಸಬಹುದು. ಇಂಥವನೂ ಪ್ರಾತಿನಿಧಿಕವಾಗಿ ರೈತರ ಪರವಾಗಿ ಹೋರಾಡಬಹುದು. ಆದರೆ ಕೃಷಿ ಕಾರ್ಮಿಕ, "ಸಣ್ಣ ರೈತ" ಇತ್ಯಾದಿ ಪ್ರಶ್ನೆ ಬಂದಾಗ ಇವನು ಶ್ರೀಮಂತ ರೈತನೇ, ದೊಡ್ಡ ರೈತನೇ ಎನಿಸಿ ಮಾಲೀಕಗಾರಿಕೆಯ ಲೇಪನ ಇವನಿಗೆ ಅಂಥಿಬಿಡುವುದು ಹಾಗಾಗಿ ಇವನ ಹಿತಾಸಕ್ತಿ ಕೃಷಿ ಕಾರ್ಮಿಕ ಅಥವಾ ಸಣ್ಣ ರೈತರ ಪರವಾಗಿರುತ್ತದೆ ಎಂಬುದಕ್ಕೆ ಖಚಿತತೆ ಇಲ್ಲ. ರೈತರ ಕ್ರಾಂತಿ ಇದನ್ನು ವಿಕಾಸ ಕ್ರಮ ಎನ್ನಬಹುದು. ಇದಕ್ಕೆ ನಿರ್ಧಿಷ್ಟ ಗುರಿ ಸಿದ್ಧಾಂತ ಸಾಧಿತವಾಗದಿದ್ದಾಗ ದೀರ್ಘಕಾಲೀನ ಸ್ಥಾಯಿತ್ವವಿಲ್ಲದಿದ್ದಾಗ ಅಲ್ಪಕಾಲದ ಬದಲಾವಣೆ ಪ್ರಭಾವ ಹೀನವಾಗಬಹುದು. ರೈತ ಸತ್ಯಾಗ್ರಹ ಎಂದರೆ, ಅಸಹಕಾರ ಮಾರ್ಗದಿಂದ ಎದುರು ಪಕ್ಷದವರು ಮಣಿಯ ಬೇಕಾದ ಸ್ಥಿತಿಗೆ ತರುವುದು, ಹಕ್ಕೊತ್ತಾಯಗಳನ್ನು ಅವರ ಪ್ರಜ್ಞೆಗೆ ತರುವುದು, ಅಂದರೆ ತಮಗೆ ತಾವೇ ಅನುಭವಿಸುವ ನೋವು, ಗುರಿಯ ಮಾರ್ಗದಲ್ಲಿ ನೋವೆಂದೆಣಿಸದೆ ಕಾರ್ಯಸಾಧನೆಯಲ್ಲಿ ಮಗ್ನರಾಗುವುದಾಗಿದೆ. ಕ್ರಾಂತಿಯಲ್ಲಿ ಪರಹಿಂಸೆ, ನೋವು ಇರುವ ಸಾಧ್ಯತೆ ಇದ್ದರೂ, ಸತ್ಯಾಗ್ರಹದಲ್ಲಿ ಸ್ವನಿಷ್ಠೆ ಸ್ವಯಿಚ್ಛೆಯಿಂದ ನೋವು ಸಂಕಷ್ಟಗಳನ್ನು ಅನುಭವಿಸಿ ಕಾರ್ಯಸಾಧನೆಗೆ ಆಗ್ರಹ ಪಡಿಸುವುದಾಗುತ್ತದೆ. ಪ್ರಜ್ಞೆ ಬೆಳೆಸಿಕೊಳ್ಳಲಿಚ್ಛಿಸದ ಎದುರು ಪಕ್ಷದವರಲ್ಲಿ ಈ ಮಾರ್ಗಯಶಸ್ವಿಯಾಗುವುದು ಕ್ರಮ ಸಾಧ್ಯ ಗಾಂಧಿಜಿ ಇದರಲ್ಲಿ ಗೆದ್ದು ಯಶ್ವಸ್ವಿಯದವರು. ರೈತರ ದಂಗೆ ಬಂಡಾಯದಲ್ಲಿ ಬಲಪ್ರಯೋಗ ಸಾಮಾನ್ಯವಾಗಿರುತ್ತದೆ. ಇದಕ್ಕೆ ಸೈದ್ಧಾಂತಿಕ ಹಿನ್ನಲೆ ಇರಲೇಬೇಕೆಂದಿಲ್ಲ. ಶೋಷಣೆ ವಿರುದ್ಧ ಪ್ರದರ್ಶನ, ಪ್ರತಿಭಟನೆ, ಬಹಿಷ್ಕಾರ, ಲೂಟಿ, ಹಿಂಸಾಚಾರ ಇವೆಲ್ಲ ಇದರ ವ್ಯಾಪ್ತಿಗೆ ಬರುತ್ತವೆ. ರೋಷ, ಪ್ರತೀಕಾರ ತೀರಿದರೆ ದಂಗೆ ಅಲ್ಲಿಗೆ ನಿಲ್ಲಬಹುದು, ತತ್ಕಾಲದ ಪರಿಹಾರವೇ ಇದಕ್ಕೆ ಮದ್ದಾಗಬಹುದು. ಇದೊಂದು ರೀತಿ ತಕ್ಷಣದ ಉದ್ರೇಕವಾಗಿ ಶಮನದ ಹಾದಿ ಕಂಡ ಕೂಡಲೇ ಆ ರಭಸ ಇಳಿಮುಖವಾಗುತ್ತ ಬರುತ್ತದೆ.[9]

ಸಾಮಾನ್ಯವಾಗಿ ಚಳವಳಿಗಳು ಅಧಿಕಾರ ಅಥವಾ ಒಡೆತನ ವ್ಯವಸ್ಥೆಯನ್ನು ಶೋಷಣೆಯ ಸಂದರ್ಭವಾದಾಗ ಅದನ್ನು ಸಾಕಷ್ಟು ಮಣಿಸ ಬಲ್ಲ ಸಮೂಹ ಸಂಘಟಿತ ಶಕ್ತಿ ಆಗಿರುತ್ತವೆ. ಈ ಅಧಿಕಾರ ಅಥವಾ ಒಡೆತನ ವ್ಯವಸ್ಥೆಯಲ್ಲಿ ರೈತವರ್ಗ, ಭೂಮಾಲೀಕ ವರ್ಗ, ಆಳುವ ಒಡೆಯ ಎಂದೆಲ್ಲ ಆಧುನಿಕ ವರ್ಗೀಕರಣವಿದೆ. ಪ್ರಾಚೀನ ಕಾಲದಲ್ಲಿ ದ್ರಾವಿಡರ ಮೇಲೆ ನಡೆದ ಆರ್ಯರ ಧಾಳಿ ಕಾಲದಿಂದಲೇ ಸೋತವರು ಗೆದ್ದವರ ದಾಸರಾಗಿ ಆಳು-ಒಡೆಯ ಎಂಬ ಕಲ್ಪನೆ ಬಂತು. ಅದನ್ನು ಇಂದಿನ ಪರಿಭಾಷೆಯಲ್ಲಿ ಕೃಷಿ ಕಾರ್ಮಿಕ-ಮಾಲೀಕ ಎಂಬ ವರ್ಗಗಳಾಗಿ ಪರಿಗಣಿಸಿ ರೈತ ಭೂಮಾಲೀಕರ ಕುರಿತು ಸಾಂಧರ್ಭಿಕವಾಗಿ ಹೇಳುವುದು ಉಂಟು!.

ಕರ್ನಾಟಕದಲ್ಲಿ ಅನಾದಿ ಕಾಲದಿಂದ ಪ್ರಭುತ್ವದ ವಿರುದ್ದ, ಅವ್ಯವಸ್ಥೆ ವಿರುದ್ಧ ಸಾಮಾನ್ಯ ಜನರು, ರೈತರು ಚಳುವಳಿಗಳನ್ನು ನಡೆಸಿಕೊಂಡು ಬಂದಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಒಡೆಯರ ಆಳ್ವಿಕೆಯಿಂದಲೂ ರೈತ ಹೋರಾಟಗಳು ನಡೆದಿವೆ. ಚಿಕ್ಕದೇವರಾಜ ಒಡೆಯರು, ಕಾಲದಲ್ಲಿ ಅಧಿಕ ತೆರಿಗೆಯಿಂದ ರೊಚ್ಚಿಗೆದ್ದ ರೈತರು ಜಂಗಮರನ್ನು ಬೆಂಬಲಿಸಿ ದಂಗೆಯೆದ್ದರೂ, ಅನೇಕ ರೈತರು ಮಧ್ಯವರ್ತಿ ಮಂತ್ರಿಯಿಂದ ಪ್ರಾಣಕಳೆದುಕೊಂಡರು ಮುಂದೆ ಟಿಪ್ಪು, ಪೂರ್ಣಯ್ಯನವರ ಕಾಲದಲ್ಲಿ ರೈತ ಹೋರಾಟಗಳು ನಡೆದವು.

1830ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಡೆದ ನಗರ ದಂಗೆಯು ಪ್ರಮುಖವಾಗಿದ್ದು, ಮೈಸೂರು ಪ್ರಾಂತ್ಯದಲ್ಲಿ ಹೊಸ ಮೈಲಿಗಲ್ಲಾಗಿತ್ತು. ಬಿದನೂರಿನ ಜಹಗೀರದಾರ ಅಪ್ಪಣ್ಣನು ಮೈಸೂರು ಖಜಾನೆಗೆ ಕೊಡಬೇಕಾಗಿದ್ದ ತೆರಿಗೆಯನ್ನು ದುರುಪಯೋಗ ಪಡಿಸಿಕೊಂಡು ಕೆಲಸ ಕಳೆದು ಕೊಂಡನು. ಇದೇ ವೇಳೆಗೆ ಸಾದರ ಮಲ್ಲ ಎಂಬುವನು ಸೆರೆಮನೆಯಿಂದ ಹೊರಬಂದು ಬಿದನೂರಿನ ಉತ್ತರಾಧಿಕಾರಿಯೆಂದು, ರೈತರನ್ನು ಎತ್ತಿಕಟ್ಟಿ ಅಪ್ಪಣ್ಣನ ಬೆಂಬಲ ಪಡೆದು ಕಂದಾಯ ಮಾಫಿ ಮಾಡುವುದಾಗಿಯು ಹೇಳಿ ದಂಗೆ ನಡೆಸಲು ಪ್ರಯತ್ನಿಸಿದನು. ಬಿದನೂರು ದೊರೆಯ ಮುದ್ರೆಯನ್ನು ಅಪಹರಿಸಿ ಬೂದಿ ಬಸಪ್ಪನಗರಖಾವಿಂದ ಎಂದು ಮುದ್ರೆ ಹಾಕಿ ರೈತರನ್ನು ನಂಬಿಸಿದನು. ಕೊನೆಗೆ

ಬಿದನೂರಿನಾದ್ಯಂತ ದಂಗೆಗಳನ್ನು ನಡೆಸಿದನು. ಇದನ್ನು ಒಡೆಯರಿಗೆ ಹತ್ತಿಕ್ಕಲು ಸಾಧ್ಯವಾಗದೇ ಬ್ರಿಟಿಷರ ನೆರವು ಪಡೆಯ ಬೇಕಾಯಿತು. ಮುಖ್ಯವಾಗಿ ಇಲ್ಲಿ ರೈತರ ಅತೃಪ್ತಿಯನ್ನು ಸರ್ಕಾರ ಅಥವಾ ರಾಜರ ಗಮನಕ್ಕೆ ತರದೆ ರೈತರ ಸುಲಿಗೆ ಮಾಡಿದ್ದು ಹಾಗೂ ಅವರನ್ನು ದಂಗೆಗೆ ಪ್ರಚೋದಿಸಿದ ಇಬ್ಬಂದಿ ನಡಾವಳಿ ರೈತ ಚಳವಳಿಗೆ ದಾರಿ ಮಾಡಿಕೊಟ್ಟಿತು. ಕೊನೆಗೆ ರೈತ ಚಳವಳಿಯ ಕಾರಣ ತಿಳಿದು ಪರಿಹಾರ ಒದಗಿಸಿದರು. ಹೀಗಾಗಿ ನಗರ ಬಂಡಾಯ ರೈತರ ಸಮಗ್ರ ವ್ಯಾಪಕ ಬಂಡಾಯ ಮುಖಿಯಾಗಿದ್ದರೂ, ನಾಯಕತ್ವದ ಸ್ವಾರ್ಥ ಹಾಗೂ ಅಸಮರ್ಥನೆ ಅದಕ್ಕೆ ತಾತ್ವಿಕ ಗೌರವವನ್ನು ತಂದು ಕೊಡಲಿಲ್ಲ, ಆದರೂ ರೈತರ ಚಳವಳಿ ತನ್ನ ಪರಿಹಾರವನ್ನು ರಾಜರ ಮೂಲಕ ಕಂಡು ಕೊಂಡಿದ್ದು ಸರ್ಕಾರ ಹಾಗೂ ಜನಪ್ರತಿನಿಧಿಗಳ ಸಾಂಕೇತಿಕ ಸಂವಾದದ ಫಲಶೃತಿಯೇ ಆಗಿತ್ತು.

ನಗರ ದಂಗೆಯಿಂದ ಸ್ಪೂರ್ತಿ ಪಡೆದ ಸಂಸ್ಥಾನದ ರೈತರುಗಳೂ ಕೂಡ ತಮ್ಮ ಶೋಷಣೆ ವಿರುದ್ಧ ಸಿಡಿದೆದ್ದರು. ಸಂಗೊಳ್ಳಿ ರಾಯಣ್ಣನ ಬಂಡಾಯ, ಕೊಡಗು ಮತ್ತು ಅಮರಸುಳ್ಯದ ಬಂಡಾಯ (ಅಪರಂಪರ ಕಲ್ಯಾಣಸ್ವಾಮಿ-ಪುಟ್ಟಬಸಪ್ಪನ ನೇತೃತ್ವದ ಬಂಡಾಯ), ಕನ್ನಡ ಜಿಲ್ಲೆಯ ಜಂಗಲ್ ಸವಲತ್ತು ಹೋರಾಟ, ಉತ್ತರ ಕನ್ನಡ ಜಿಲ್ಲೆಯ ವನದುಃಖ ವಿರೋಧಿ ಚಳವಳಿ ಪರಂಪರೆ, ಹುಲಬನ್ನಿ ಕರನಿರಾಕರಣ ಚಳವಳಿ, ಶಿರಸಿ, ಸಿದ್ದಾಪುರ ತಾಲ್ಲೂಕಿನ ರೈತರ ಕರನಿರಾಕರಣೆ, ಹಿರೇಕೆರೂರಿನ ಕರನಿರಾಕರಣೆ ಚಳವಳಿಗಳು ನಡೆದವು ಈ ಚಳವಳಿಗಳು ಕ್ರಮೇಣ ರಾಜಕೀಯ ಹಿತಾಸಕ್ತಿಯ ರೂಪಪಡೆದುಕೊಂಡವು.

ವ್ಯಾಪಾರದ ಮುಗ್ಗಟ್ಟು, ಧಾರಣೆವಾಸಿ ವ್ಯತ್ಯಾಸ , ಕೂಲಿ, ಸಂಬಳ, ಅಸೌಕರ್ಯಗಳು ಬಡರೈತರಿಗೆ ಕಷ್ಟವಾಗಿತ್ತು. ಸಾಗುವಳಿಯಿಂದ ಉತ್ಪತ್ತಿಯ ಮೊಬಲಗಿನಲ್ಲಿ ಕಂದಾಯ ಕೊಟ್ಟು ಕೂಲಿ ಸಂಬಳ ನೀಡಿ ಸಾಗುವಳಿ ಖರ್ಚು ಕಳೆದರೆ ಜೀವನಕ್ಕೆ ಏನು ಉಳಿಯುತ್ತಿರಲಿಲ್ಲ. ಕೃಷಿ ಅಷ್ಟು ಹೀನ ಸ್ಥಿತಿಗೆ ತಲುವುತ್ತಿದೆ. ರೈತರ ಈ ಕುಂದು ಕೊರತೆಗಳನ್ನು ಸರ್ಕಾರಕ್ಕೆ ತಿಳಿಸಿಕೊಟ್ಟು, ಕಂದಾಯ ಕಡಮೆ ಮಾಡುವುದು ಅವಶ್ಯಕ ಎಂದು ಮನಮರಿಕೆ ಮಾಡಬೇಕು. ರಿಯಾಯ್ತಿ, ಸೌಕರ್ಯ ಪಡೆಯುವುದು ಅಗತ್ಯವಾಗಿತ್ತು. ಈ ಕಾರಣಕ್ಕೆ 1931 ಏಪ್ರಿಲ್ 4 ರಂದು ಜಿಲ್ಲೆಯ

ಎಲ್ಲಾ ರೈತರ ಮತ್ತು ಜಮೀನ್ದಾರರ ಸಮ್ಮೇಳನವನ್ನು ಏರ್ಪಡಿಸಲು ತೀರ್ಮಾನಿಸಲಾಯಿತ್ತು. ಅಂದರೆ 1930 ರ ದಶಕಗಳಲ್ಲಿ ರೈತರ ದೂರು ದುಮ್ಮಾನಗಳನ್ನು ಸಂಘಟನಾತ್ಮಕವಾಗಿ, ಕ್ರಮಬದ್ಧವಾಗಿ ಸರ್ಕಾರಕ್ಕೆ ಸಲ್ಲಿಸಿ ಪರಿಹಾರ ಪಡೆಯಲು ಹೋರಾಟ ನಡೆಸಿದ ಚಿತ್ರಣ ಕಂಡು ಬರುತ್ತದೆ.[10]

ಈ ಹಿನ್ನಲೆಯಲ್ಲಿ 1931 ರ ನವೆಂಬರ್ 26 ರಂದು ಕಾನಕಾನಹಳ್ಳಿಯಲ್ಲಿ ಸಾವಿರಾರು ಮಂದಿ ರೈತರು ಸಭೆ ಸೇರಿದರು. ಅನೇಕ ರೈತ ಮುಖಂಡರು ಸಭೆಯಲ್ಲಿ ಭಾಗವಹಿಸಿದರು. ಕಂದಾಯ ರಿಯಾಯಿತಿ, ಬಾಲ ತೆರಿಗೆ, ಹುಲ್ಲುಗಾವಲು ತೆರಿಗೆ, ಕಟ್ಟಿಗೆ ಸುಂಕ, ಎತ್ತುವರಿ ಜಮೀನು, ಜುಲ್ಮಾನೆ ದ್ರವ್ಯ ಮುಂತಾದವುಗಳಿಗೆ ಪರಿಹಾರ ಸೌಕರ್ಯ ಇತ್ಯಾದಿಗಳ ಕುರಿತು ಗೊತ್ತುವಳಿಗಳಿನ್ನು ಮಾಡಲಾಯಿತು. ತಾಲ್ಲೂಕಿನಲ್ಲಿ 5-10 ಹಳ್ಳಿಗಳನ್ನು ಬಿಟ್ಟರೆ ಉಳಿದ ಹಳ್ಳಿಗಳಲ್ಲಿ ಬೆಳೆ ಆಗಿಲ್ಲ, ದನಕರುಗಳ ವ್ಯಾಪರವಿಲ್ಲ, ಮೇವಿಗೆ ಬರ ಬಂದಿದೆ, ತಾಲ್ಲೂಕು ಎಲ್ಲಾ ಕಾಡು ಪ್ರದೇಶ, ತರೀ ವ್ಯವಸಾಯವೇ ಇಲ್ಲ, ಅಂದರೆ ಮಳೆನೀರೇ ವ್ಯವಸಾಯ ಆಧಾರ ಇಲ್ಲದಿದ್ದರೆ ಕೃಷಿ ಕಾರ್ಯವೆಲ್ಲಾ ಸ್ಥಗಿತಗೊಳ್ಳವ ಸನ್ನಿವೇಶ ಎದುರಾಗುತ್ತದೆ. ರೈತರು ಹಸಿವಿನಿಂದ ನರಳುತ್ತಿದ್ದಾರೆ. ಆದರೂ ಕಂದಾಯ ದರ ಹೆಚ್ಚಾಗಿರುವುದರಿಂದ ಸರ್ಕಾರ ಅದನ್ನು ಕಡಿಮೆ ಮಾಡಬೇಕೆಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚಿಸಿ ಸರ್ಕಾರದ ಗಮನಕ್ಕೆ ತರುವ ಪ್ರಯತ್ನ ಮಾಡಲಾಯಿತು.

ಬೆಂಗಾಡಾಗಿದ್ದ ಈ ಪ್ರದೇಶದಲ್ಲಿ ಮಳೆಯನ್ನಾಶ್ರಯಿಸಿ ಕೃಷಿ ಮಾಡಲಾಗುತ್ತಿತ್ತು. ಈ ಮೇಳೆಗೆ ಕೃಷ್ಣರಾಜ ಸಾಗರ ಅಣೆಕಟ್ಟು ನಿರ್ಮಿಸಿ ಕಾವೇರಿ ನೀರನ್ನು ಕೃಷಿ ಮುಖ್ಯವಾಗಿ ಹಾಗೂ ವಿದ್ಯುತ್ ಉತ್ಪಾದನೆಗೆ ಅನುಕೂಲ ಮಾಡಿಕೊಟ್ಟು ಹಸಿರು ನಾಡಾಗಿ ಮಾಡಲಾಯಿತು. ಈ ಮೇಳೆಗಾಗಲೇ ಇರ್ವಿನ್ ನಾಲಾ ಪ್ರದೇಶದ ರೈತರಿಗೆ "ಬ್ಲಾಕ್ ಸಿಸ್ಟಂ" ಮತ್ತು "ವಂತಿಕೆ" ಪದ್ಧತಿಯನ್ನು ಹಾಕಲಾಗಿತ್ತು. ಹಾಗಾಗಿ ಇರ್ವಿನ್ ನಾಲಾ ಸಮಿತಿ ವರ್ಕಿಂಗ್ ಕಮಿಟಿಗೆ ನಾಲಾ ಪ್ರದೇಶದ ನಾಲ್ಕು ಮಂದಿ ರೈತರನ್ನು ನಾಮಕರಣ ಮಾಡಲಾಯಿತ್ತು.

ನಾಲಾ ಪ್ರದೇಶದ ರೈತರ ಸಂಕಷ್ಟಗಳನ್ನು ಕುರಿತು ಡಾ॥ ಕೋಲ್ಮನ್‌ರವರಿಗೆ ಪತ್ರ ಬರೆದರು. ಅದರಂತೆ ಬ್ಲಾಕ್‌ಸಿಸ್ಟಂ ಪ್ರಸ್ತುತ ನಮ್ಮ ದೇಶ ಪರಿಸ್ಥಿತಿಗೆ ನುಕೂಲ ಕರವಲ್ಲ. ವಂತಿಕೆ ದರ ಹೆಚ್ಚಾಗಿದೆ ಜೊತೆಗೆ ತೆರಿಗೆ ದರವೂ ದುಬಾರಿಯಾಗಿದೆ. ವಂತಿಕೆ ಕಂತಿನ ಬಾಕಿ ಮೇಲೆ ಬಡ್ಡಿ ನ್ಯಾಯವಲ್ಲ, ಆರು ವರ್ಷಗಳ ನಂತರ ಕಂದಾಯ ಪುನರ್ ವಿಮರ್ಶೆ ಮಾಡುವ ಪದ್ಧತಿ ನ್ಯಾಯವಲ್ಲ. ಕೆರೆಗಳ ನೀರು ಕೊಡುವ ಬಗ್ಗೆ ಖಚಿತತೆ ನೀಡಿಲ್ಲ ಸಮಿತಿಯ ಎಲ್ಲ ರೈತರ ಬಳಿ ಹೋಗಿ ವಿಷಯಕ್ಕೆ ಸಂಬಂಧಿಸಿದಂತೆ ಮಾಡಿರುವ ವಿಮರ್ಶೆ ಬಗ್ಗೆ ಸ್ವಷ್ಟತೆ ನೀಡಿಲ್ಲ ಎಂದು ಈ ಸಭೆಯಲ್ಲಿ ವಿಶ್ಲೇಷಣೆ ಮಾಡಲಾಯಿತು.[11]

ಹೀಗೆ ರೈತರ ದುರುದುಮ್ಮಾನಗಳಿಗೆ ಸಮರ್ಥ ಪ್ರಾತಿನಿಧಿಕ ಪ್ರತಿಪಾದಾನೆ ಹಾಗೂ ಸರ್ಕಾರದ ಪರಿಹಾರದ ನಿರೀಕ್ಷೆ ಇಲ್ಲದೆ ಇದ್ದಾಗ ಸಭೆ ಸೇರಿ ಅಹವಾಲುಗಳನ್ನು ಇಟ್ಟು ಸರ್ಕಾರವನ್ನು ಎಚ್ಚರಿಸುವ ಜಾಯಮಾನ ಆ ಕಾಲದಲ್ಲಿಯೇ ಇತ್ತು. ಅದು ಈಡೇರದಿದ್ದಾಗ ಅವರು ಅನುಸರಿಸಿದ ಮಾರ್ಗವೇ ಈ ಚಳವಳಿಯಾಗಿತ್ತು.

**ಅಡಿ ಟಿಪ್ಪಣಿಗಳು**

1. Lowle R.H. 1934, An Introduction to cultural Autropology P-10.
2. ಡಾ. ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು (ಸಂ-1) 2006, ಬೆಂಗಳೂರು. ಪುಟಗಳು 1-2.
3. ಡಾ. ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು (ಸಂ-1) 2006, ಬೆಂಗಳೂರು. ಪುಟ 6.
4. ಡಾ. ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು (ಸಂ-1) 2006, ಬೆಂಗಳೂರು. ಪುಟಗಳು 6-7.
5. ಹೆಚ್.ವಿ.ನಾಗೇಶ., ಎ.ಇ. ಪುನೀತ್ (1984), ಭಾರತದಲ್ಲಿ ರೈತ ಹೋರಾಟಗಳು, ಪುಟ-20.

6. ಹೆಚ್.ವಿ.ನಾಗೇಶ., ಎ.ಇ. ಪುನೀತ್ (1984), ಭಾರತದಲ್ಲಿ ರೈತ ಹೋರಾಟಗಳು, ಪುಟ-20

7. ಎಂ.ವಿ.ನಾಡಕರ್ಣಿ (1986), ಕರ್ನಾಟಕದ ರೈತ ಹೋರಾಟಗಳು, ಬೆಂಗಳೂರು. ಪುಟ-2.

8. ಡಾ. ಎಂ.ಜಿ. ನಾಗರಾಜ್‌ಮೇಲೆ ಉದ್ಧರಿಸಿದ ಗ್ರಂಥ, ಪುಟ-33.

9. ಡಾ. ಎಂ.ಜಿ. ನಾಗರಾಜ್‌ಮೇಲೆ ಉದ್ಧರಿಸಿದ ಗ್ರಂಥ, ಪುಟ-8-9

10. ವಿಶ್ವ ಕರ್ನಾಟಕ ಪತ್ರಿಕೆ: 29 ಮಾರ್ಚ್, 1931.

11. ವಿಶ್ವ ಕರ್ನಾಟಕ ಪತ್ರಿಕೆ, 29 ನವೆಂಬರ್ 1931.

# ಅಧ್ಯಾಯ-5
# ಇರ್ವಿನ್ ನಾಲಾ ರೈತ ಚಳವಳಿ 1931-32

5.1 ನೀರಾವರಿ ಮತ್ತು ಬೆಳೆ ವಿಧಾನ

5.2 ನೀರಿನ ದರ ಮತ್ತು ವಂತಿಕೆ (ಕಾಂಟ್ರಿಬ್ಯೂಷನ್)

5.3 ಚಳವಳಿಯ ಮೊದಲ ಪ್ರಯತ್ನಗಳು

5.4 ರೈತರ ಬೇಡಿಕೆಗಳು

5.5 ಸಂಪನ್ಮೂಲ ಸಂಗ್ರಹ

5.6 ಚಳವಳಿಯ ಪೂರ್ವ ತಯಾರಿ ಹಾಗೂ ಪ್ರಚಾರ

5.7 ಜಾಥಾ ಸಂಧರ್ಭದಲ್ಲಿ ರೈತರು ಅನುಸರಿಸಬೇಕಾಗಿದ್ದ ನಿಯಮಗಳು

5.8 ಚಳವಳಿಯ ಮುಂದುವರಿದ ಭಾಗ

5.9 ಚಳವಳಿಯನ್ನು ಒಡೆಯಲು ಸರ್ಕಾರ ನಡೆಸಿದ ಹುನ್ನಾರಗಳು

# ಅಧ್ಯಾಯ-5

## ಇರ್ವಿನ್ ನಾಲಾ ರೈತ ಚಳವಳಿ (1931-32)

ಇರ್ವಿನ್ ನಾಲಾ ರೈತ ಚಳವಳಿಯು 1930-32ರಲ್ಲಿ ಮಂಡ್ಯ ಜಿಲ್ಲೆಯಲ್ಲಿ ಸರ್ಕಾರದ ನೀರಾವರಿ ಮತ್ತು ಕೃಷಿ ನೀತಿಯ ವಿರುದ್ಧವಾಗಿ ಜರುಗಿದ ಬಹುಮುಖ್ಯವಾದ ಆಂದೋಲನವಾಗಿದೆ. ಬ್ರಿಟಿಷರ ಆಳ್ವಿಕೆಗೆ ವಿರುದ್ಧವಾಗಿ ಹೋರಾಟಕ್ಕೆ ನಿಂತ ಜನವರ್ಗದಲ್ಲಿ ರೈತರು ಪ್ರಧಾನ ಪ್ರಾತ್ರವಹಿಸಿದ್ದರು. ಜಮೀನು ಸಂಬಂಧವಾಗಿ ಹೊಸ ಕಾಯಿದೆಗಳನ್ನು ಜಾರಿ ಮಾಡಿ. ಅದುವರೆಗೆ ನ್ಯಾಯ ಸಮ್ಮತವಾದುದು, ಸಹಜವಾದುದು ಎಂದು ಗ್ರಾಮೀಣ ಜನತೆ ವಿಶ್ವಾಸ ತಳೆದಿದ್ದ ಒಂದು ಸಮುದಾಯ ವ್ಯವಸ್ಥೆಯನ್ನು ಬ್ರಿಟಿಷ ಆಳ್ವಿಕೆ ಗೊಂದಲಕ್ಕೀಡು ಮಾಡಿತು. ರೈತ ಹೋರಾಟಗಳಲ್ಲಿ ಹಲವು ಮುಖ್ಯ ಮಾದರಿಗಳನ್ನು ಕಾಣಬಹುದು. ರೈತನೇ ಹೊಲದ ಒಡೆಯನಾಗಿದ್ದ ರೈತವಾರಿ ಪ್ರದೇಶಗಳಲ್ಲಿ ಮಿತಿಮೀರಿದ ಕಂದಾಯದ ಹೊರೆ, ನೀರಿನ ತೆರಿಗೆಯ ಏರಿಕೆ, ಅಭಾವಕಾಲದಲ್ಲಿ ಕಂದಾಯದ ಕಡ್ಡಾಯ ವಸೂಲಿ, ಇಂತಹವು ರೈತರನ್ನು ಕಾಡುತ್ತಿದ್ದ ಸಮಸ್ಯೆಗಳಾಗಿದ್ದವು.[1]

ಮಂಡ್ಯ ಜಿಲ್ಲೆಯ ಗ್ಯಾಸೆಟಿಯರ್‌ನಲ್ಲಿ "ಬೇಸಾಯಗಾರರ" ಚಳವಳಿ ಎಂದು ಕರೆಯಲಾದ "ಇರ್ವಿನ್ ನಾಲಾ ರೈತರ ಚಳವಳಿ" ಹೆಚ್.ಕೆ. ವೀರಣ್ಣಗೌಡ, ಹೆಚ್.ಕೆ. ಪುಟ್ಟಣ್ಣ, ಹೆಚ್.ಹೊನ್ನಯ್ಯನವರ ನೇತೃತ್ವದಲ್ಲಿ ನಡೆಯಿತು. ಆದು ಅತ್ಯಂತ ಸೌಮ್ಯವಾಗಿ, ಅನುಕರಣೀಯವಾಗಿ ನಡೆದ ಹೊಸ ಮಾದರಿಯ ಚಳವಳಿ. ಆ ಕಾಲಕ್ಕೆ ಅದು ಮಂಡ್ಯ ತಾಲ್ಲೂಕಿನಲ್ಲಿ ಸುವ್ಯವಸ್ಥಿತವಾಗಿ ನಡೆದ ದೊಡ್ಡ ಘಟನೆಯಾಗಿತ್ತು. ಸುಮಾರು ನಾಲ್ಕು ಸಾವಿರ ರೈತರು ಈ ಚಳವಳಿಯಲ್ಲಿ ಭಾಗವಹಿಸಿ ಮದ್ದೂರಿನಿಂದ ಬೆಂಗಳೂರಿನವರೆಗೆ ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡಿ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್‌ರವನ್ನು ಭೇಟಿ ಮಾಡಿ ಪರಿಹಾರ ಪಡೆದ ಫಲವಂತಿಕೆಯ ಚಳವಳಿ ಇದಾಗಿತ್ತು.[2]

ಅಹಿಂಸಾತ್ಮಕವಾಗಿ, ಶಾಂತಿಯುತವಾಗಿ ಸರ್ಕಾರದ ಕ್ರಮಗಳಿಗೆ ವಿರುದ್ಧವಾಗಿ ಹೋರಾಟ ಹಮ್ಮಿಕೊಳ್ಳುವ ಮೂಲಕ ಪ್ರಭುತ್ವಕ್ಕೆ ಸವಾಲಾದ ರೈತ ಸಮುದಾಯದ ಹೋರಾಟ ಮಹತ್ವವಾದುದ್ದು.

ಈಗಿನ ವಿಶ್ವೇಶ್ವರಯ್ಯ ನಾಲೆಯನ್ನೇ 1930ರಲ್ಲಿ "ಇರ್ವಿನ್ ನಾಲೆ" ಎಂದು ಕರೆಯಲಾಗುತ್ತಿತ್ತು. ಈ ನಾಲಾ ಪ್ರದೇಶದಲ್ಲಿ ಅಂದರೆ ಕೃಷ್ಣರಾಜಸಾಗರದಿಂದ ಹೊರಬರುವ ಕಾವೇರಿ ಶಾಖೆ, ಶಿಂಷಾ ಶಾಖೆಯ ರೈತರು

1. ಅನುಸರಿಸಬೇಕಾದ "ಬ್ಲಾಕ್ ಸಿಸ್ಟಂ" ವ್ಯವಸಾಯ ಕ್ರಮ.

2. ನೀರಾವರಿಯಾಗುವ ಜಮೀನುಗಳಿಗೆ ಕೊಡಬೇಕಾಗಿರುವ ಕಂದಾಯ.

3. ವಂತಿಕೆ ಹಣಕೊಡುವುದು ತಡವಾದರೆ ಅದಕ್ಕೆ ಕೊಡಬೇಕಾಗಿರುವ ಬಡ್ಡಿ, ಇತ್ಯಾದಿ ವಿಷಯಗಳ ಕುರಿತು ಮೈಸೂರು ಸರ್ಕಾರ ಹೊರಡಿಸಿದದ್ದ ಆಜ್ಞೆಯು ರೈತರಿಗೆ ಮಾರಕವಾಗಿತ್ತು.[3]

ಇದನ್ನು ವಿರೋಧಿಸಿ ನಡೆದ ಚಳವಳಿ ಇರ್ವಿನ್ ನಾಲಾ ರೈತ ಚಳವಳಿ.

## 5.1 ನೀರಾವರಿ ಮತ್ತು ಬೆಳೆ ವಿಧಾನ.

ಕೃಷ್ಣರಾಜ ಸಾಗರ ಅಣೆಕಟ್ಟಿನ ವಿಶೇಷ ಸಮಿತಿ ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ರಚನೆಯಾದ ಬಳಿಕ ಕಾಲುವೆಯ ಮುಖ್ಯ ಲಕ್ಷಣಗಳಿಗೆ ಸಮ್ಮತಿ ನೀಡಿತು. ಅಲ್ಲದೇ ನೀರಾವರಿ ಪದ್ಧತಿ ಕುರಿತು ಹಲವಾರು ಪ್ರಸ್ತಾವನೆಯನ್ನು ಮುಂದಿಟ್ಟಿತು. ಈ ಸಮಿತಿಯು ಅಧಿಕ ನೀರಾವರಿ ಅಭಿವೃದ್ಧಿಯಿಂದಾಗಿ ಅನಾರೋಗ್ಯ ಪರಿಸ್ಥಿತಿ ನಿರ್ಮಾಣವಾಗುತ್ತೆದೆ ಎಂಬುದಾಗಿಯೂ, ಪುನರಾವರ್ತನ ಬೇಸಾಯ ಪದ್ಧತಿಯು ಸಾಧಾರಣವಾದ ಭತ್ತ ಬೇಸಾಯಕ್ಕಿಂತ ಈ ದೇಶಕ್ಕೆ ಹೆಚ್ಚಿನ ಲಾಭ ತರುವಂತಹ ಪದ್ಧತಿಯಾಗಿದೆ. ಪರಿಣಾಮವಾಗಿ ಕಾಲುವೆಗಳಲ್ಲಿ ***"Block System"*** ನೀರಾವರಿ ಪದ್ಧತಿಯನ್ನು ಪರಿಚಯಿಸಲಾಯಿತು. [4]

ಈ ನೀರಾವರಿ ಪದ್ಧತಿ ಅಡಿಯಲ್ಲಿ ಈ ಸಮಿತಿಯು ಪುನರಾವರ್ತಿತ ಬೆಳೆ ಕೃಷಿ ಪದ್ಧತಿಯನ್ನು ಕೈಗೊಳ್ಳಬೇಕೆಂಬುದಾಗಿ ತಿಳಿಸಿತು. ಈ ಪುನರಾವರ್ತಿತ ನೀರಾವರಿ ಪದ್ಧತಿಯ ಮುಖ್ಯ ಉದ್ದೇಶವೆಂದರೆ ದೊರಕುತ್ತಿರುವ ನೀರಿನಿಂದ ಹೆಚ್ಚಿನ ಅನುಕೂಲತೆ ಪಡೆದು ಹೆಚ್ಚಿನ ಸಂಖ್ಯೆ ರೈತರಿಗೆ ಹೆಚ್ಚು ಲಾಭವಾಗಬೇಕೆಂದು ಉದ್ದೇಶ ಹೊಂದಿತ್ತು. [5]

"ಬ್ಲಾಕ್ ಸಿಸ್ಟಂ" ಎಂದರೆ ಜಮೀನಿನ ಭಾಗದಲ್ಲಿ ಪ್ರತಿ ವರ್ಷ ಪರ್ಯಾಯ ಬೆಳೆ ಬೆಳೆವ ಪದ್ಧತಿ. ಮೊದಲ ವರ್ಷ ಭತ್ತ, ಎರಡನೇ ವರ್ಷ ಕಬ್ಬು ಅಥವಾ ಒಣ ಬೆಳೆಗಳಾದ ಆಲುಗೆಡ್ಡೆ, ಈರುಳ್ಳಿ, ಅರಿಶಿನ ಬೆಳೆಯ ಬೇಕು. ಮೂರನೇ ವರ್ಷ ಮತ್ತೊಂದು ಬೆಳೆಯನ್ನು ಬೆಳೆಯಬೇಕು. ಇನ್ನೊಂದು ಹೇಳಿಕೆ ಪ್ರಕಾರ ಒಂದು ನಿಗಧಿಯಾದ ಜಮೀನು ಪ್ರದೇಶದಲ್ಲಿ ಅಥವಾ ನಾಲೆ ಹಾಗೂ ಸಿಳುನಾಲೆ ಕೆಳಗಿರುವ ಜಮೀನುಗಳಲ್ಲಿ ಒಂದು ವರ್ಷ ಕಬ್ಬು, ಎರಡನೇ ವರ್ಷ ಭತ್ತ, ಮೂರನೇ ವರ್ಷ ಖುಷ್ಕಿ ಬೆಳೆ ಬೆಳೆಯಲು ವಿಶ್ವೇಶ್ವರಯ್ಯ ಸಮಿತಿಯು ಸ್ಥೂಲವಾಗಿ ತಿಳಿಸಿ, ಇಲಾಖಾ ಅಧಿಕಾರಿ ಮುಖ್ಯಸ್ಥರಿಗೆ ಆ ಬಗ್ಗೆ ಸೂಚನೆ ನೀಡಿತ್ತು. [6]

ವ್ಯವಸಾಯ ಇಲಾಖಾ ಡೈರೆಕ್ಟರ್ ಡಾ|| ಲೆಸ್ಲಿಕೊಲ್ಮನ್ ಅವರು ವಿಶ್ವೇಶ್ವರಯ್ಯ ಅವರ ಸಲಹೆಯನ್ನು ಎತ್ತಿಹಿಡಿದಿದ್ದರು. ಈ ವೇಳೆಗೆ ನಾಲಾ ಪ್ರದೇಶದ ಸರ್ವೇ ಆಗಿ ಸರ್ಕಾರಕ್ಕೆ ಆಯಾ ಪ್ರದೇಶದ ಭೂಗುಣವನ್ನು ಮಣ್ಣು ಪರೀಕ್ಷೆಯಿಂದ ತಿಳಿಸಲಾಗಿತ್ತು. ಫಲಿತಾಂಶವನ್ನು ಗಮನಿಸಿದ ವ್ಯವಸಾಯ ಇಲಾಖೆಯ ಹಿರಿಯ ತಜ್ಞ ಡಾ|| ಬಿ. ನರಸಿಂಹಯ್ಯಂಗಾರ್ ಅವರು ಒಂಬತ್ತು ವಿಧಗಳನ್ನು ಒಳಗೊಂಡ "ಬ್ಲಾಕ್ ಸಿಸ್ಟಂ" ವ್ಯವಸ್ಥೆಯ ರೂಪುರೇಷೆಯೊಂದನ್ನು ರೂಪಿಸಿ, ಸರ್ಕಾರಕ್ಕೆ ವರದಿ ಮಾಡಿದ್ದರು. ಅಂದಿನ ವಸಾಹತು ನೆಲೆಯ ಪ್ರಭಾವಕ್ಕೊಳಗಾಗಿದ್ದ ಮೈಸೂರು ಪ್ರಾಂತ್ಯದ ಅಧಿಕಾರಶಾಹಿ ವ್ಯವಸ್ಥೆಯಿಂದಾಗಿ ಸರ್ಕಾರ "ಬ್ಲಾಕ್ ಸಿಸ್ಟಂ" ಮತ್ತು "ವಂತಿಕೆ"ಯನ್ನು ರೈತರ ಮೇಲೆ ಜಾರಿಗೊಳಿಸಿರುವ ಪ್ರಯತ್ನದ ಜೊತೆಗೆ ನರಸಿಂಹಅಯ್ಯಂಗರ್‌ರವರು ಸ್ಥಳೀಯ ರೈತರ ಸ್ಥಿತಿಗತಿಗಳನ್ನು ಕೂಲಂಕುಶವಾಗಿ ಪರಾಮರ್ಶಿಸಿ ಸರ್ಕಾರ ಜಾರಿಗೊಳಸಲು ಹೊರಟಿರುವ ಕ್ರಮಗಳು ಎಷ್ಟರ ಮಟ್ಟಿಗೆ ನ್ಯಾಯವಾಗಿವೆ? ಎಂಬುದನ್ನು ಅರಿತು ರೈತ ಪರವಾದ ವರದಿಯನ್ನು ಸಿದ್ದಪಡಿಸಿದರು. ಇವರ ವರದಿ ಕೋಲ್ಮನರವರ ಸಲಹೆಗಳಿಗಿಂತ ಉತ್ತಮವಾಗಿಯೂ, ರೈತರಿಗೆ ಅನುಕೂಲಕರವಾಗಿದ್ದರೂ, ಕೋಲ್ಮನರ ಒತ್ತಾಯದಿಂದ ಸರ್ಕಾರ ಆ ವರದಿಯನ್ನು ಮುಚ್ಚಿಟ್ಟಿತು. ಮೊದಲೇ ಹೇಳಿದಂತೆ ರೈತರ ಸಂಕಷ್ಟಗಳ ಅರಿವು ತಾಂತ್ರಿಕ ಅನುಭವ, ಹಾಗೂ ಪ್ರಾದೇಶಿಕ ಜಾಯಮಾನ ತಿಳಿದು ರೂಪಿಸಿದ ಸಲಹೆಗಳ ಮೂವತ್ತೆರಡು ಪುಟಗಳ ವರದಿ ಆದಾಗಿತ್ತು.[7] ಹೀಗಾಗಿ ಈ ವರದಿ ವಸಾಹತು ಹಾಗೂ ಅಧಿಕಾರ ಶಾಹಿ ಹಿತಾಸಕ್ತಿಗಳಿಗೆ ವಿರುದ್ದವಾಗಿ ನಡೆದ ಪ್ರಕ್ರಿಯೆಯಾಗಿತ್ತು.

## 5.2 ನೀರಿನ ದರ ಮತ್ತು ವಂತಿಗೆ (ಕಾಂಟ್ರಿಬ್ಯೂಷನ್)

ಕೃಷ್ಣರಾಜ ಸಾಗರ ಅಣೆಕಟ್ಟನ್ನು ಜಲವಿದ್ಯುತ್ ಮತ್ತು ನೀರಾವರಿ ಯೋಜನೆಗಾಗಿ ನಿರ್ಮಾಣ ಮಾಡಲಾಯಿತು. ಅಂದಿನ ಅಂದಾಜು ಪ್ರಕಾರ ಈ ಉದ್ದೇಶಕ್ಕಾಗಿ ಐದು ಕೋಟಿ ರೂ. ಹಣ ಖರ್ಚು ಮಾಡಲಾಯಿತು. ಇರ್ವಿನ್ ಕಾಲುವೆಯ ಎರಡು ಶಾಖೆಗಳಿಗೆ ಎರಡು ಕೋಟಿಯಷ್ಟು ಹಣ ಖರ್ಚು ಮಾಡಲಾಯಿತು. ಈ ಹಣವನ್ನು ಸಾರ್ವಜನಿಕ ನಿಧಿಯಿಂದ

ಖರ್ಚು ಮಾಡಲಾಯಿತು.[8] ಈ ಉದ್ದೇಶಕ್ಕಾಗಿ ಖರ್ಚು ಮಾಡಿದ ಹಣವನ್ನು ವಾಪಸ್ಸು ಪಡೆಯಲು ಸರ್ಕಾರ ಈ ನೀರಿನ ಬಳಕೆ ಮಾಡುವ ರೈತರಿಂದ ವಂತಿಕೆಯನ್ನು ಪಡೆಯಲು ಮುಂದಾಯಿತು. ವಂತಿಕೆ ಎಂದರೆ ಅಣೆಕಟ್ಟು ಕಟ್ಟಿ ನೀರಾವರಿ ಸೌಲಭ್ಯ ಒದಗಿಸಿದ ಕಾರಣ ಸರ್ಕಾರಕ್ಕೆ ನೀಡಬೇಕಾದ ಆಭಾರಿ ಸಹಾಯಧನ. ಕೃಷ್ಣರಾಜ ಸಾಗರ ಅಣೆಕಟ್ಟಿನ ಸಮಿತಿ ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ನೀರಾವರಿ ವ್ಯವಸ್ಥೆಯನ್ನು ಕುರಿತು "ವಂತಿಕೆ" ಮತ್ತು "ನೀರಿನ ದರ" ಒಂದು ಎಕರೆಗೆ 90 ರಿಂದ 120 ರೂಪಾಯಿಗಳನ್ನು ಸರ್ಕಾರಕ್ಕೆ ಕೊಡುಗೆಯಾಗಿ ಹತ್ತು ಕಂತುಗಳಲ್ಲಿ ಕೊಡಬೇಕೆಂದು ನಿರ್ಧರಿಸಿತು. ಆದರೆ ರೈತರು ವಂತಿಕೆ ಬೆಲೆಯನ್ನು ಒಂದು ಎಕರೆಗೆ 75 ರೂಗಳನ್ನು ನಿಗಧಿ ಮಾಡಬೇಕೆಂದು ಒತ್ತಾಯಿಸಿದರು. ಸಮಿತಿ ನೀಡಿದ ಶಿಫಾರಸ್ಸಿನ ಬದಲಾಗಿ ಸರ್ಕಾರ ವಂತಿಕೆ ದರವನ್ನು 100-120 ರೂಗಳಿಗೆ ನಿಗಧಿ ಮಾಡಿತು. ಜೊತೆಗೆ ಈ ನಿಗಧಿ ನೀತಿಯು ಭೂಮಿಯ ಫಲವತ್ತತೆಯ ಮೇಲೆ ನಿಂತಿತ್ತು. ಜೊತೆಯಲ್ಲಿ ಸರ್ಕಾರ ಮೊದಲ ಒಂದು ವರ್ಷ ಒಳಗಾಗಿಯೇ ಕಂತಿನ ಹಣವನ್ನು ಪಾವತಿಸಿದರೆ ಅಂತಹ ರೈತರಿಗೆ ಸರ್ಕಾರ 5% ರಷ್ಟು ರಿಯಾಯಿತಿ ನೀಡಿತು. ಇಲ್ಲವಾದರೆ 10 ಕಂತುಗಳ ನಂತರ ಉಳಿದ ಹಣಕ್ಕೆ ಶೇ. 6.25ರಷ್ಟು ಬಡ್ಡಿ ದರವನ್ನು ಸೇರಿಸಿ ರೈತರು ಸರ್ಕಾರಕ್ಕೆ ಕೊಡಬೇಕೆಂದು ನಿಗಧಿ ಮಾಡಿತು.[9] ಏಕರೂಪದ ನೀರಿನ ಬೆಳೆಯನ್ನು ಒಂದು ಎಕರೆಗೆ 10 ರೂಪಾಯಿಯನ್ನು ನಿಗದಿ ಮಾಡಲಾಯಿತು. ಒಮ್ಮೆ ರೈತ ಭೂಮಿಗೆ ನೀರನ್ನು ತೆಗೆದುಕೊಂಡರೆ ಸರ್ಕಾರ ನಿಗಧಿ ಮಾಡಿದಷ್ಟು ನೀರಿನ ಬೆಳೆಯನ್ನು ವಾರ್ಷಿಕವಾಗಿ ಸರ್ಕಾರಕ್ಕೆ ಕೊಡಬೇಕಾಯಿತು. ರೈತರು ನೀರನ್ನು ಬಳಸಲಿ ಅಥವಾ ಬಿಡಲಿ ಕಡ್ಡಾಯವಾಗಿ ನೀರಿನ ತೆರಿಗೆ ಪಾವತಿಸಲೇ ಬೇಕು.[10]

ಈ ದರ ನಿಗಧಿ ಮತ್ತು ವಂತಿಕೆ ಕುರಿತಂತೆ ರೈತ ಸಮುದಾಯಗಳು ಇದನ್ನು ಸಮ್ಮತಿಸಲಿಲ್ಲ. ಕಾರಣ ಸರ್ಕಾರ ಜಾರಿಗೊಳಿಸಿದ "ಬ್ಲಾಕ್ ಸಿಸ್ಟಂ" ಮತ್ತು "ವಂತಿಕೆ"ಗಳು ಆಧುನಿಕ ಕೃಷಿ ಮಾದರಿಗಳಾಗಿದ್ದು ಪ್ರಾಯಶಃ ಪಾರಂಪರಿಕ ಕೃಷಿ ಪದ್ಧತಿಗಳಲ್ಲಿ ರೈತರು ಹೊಂದಿದ್ದ ನಂಬಿಕೆ ಹಾಗೂ ದರ ನಿಗಧಿ ಪಡಿಸುವಲ್ಲಿ ಅದರ ಪ್ರಮಾಣ ದುಬಾರಿ ಎನಿಸಿದ್ದಿರಬೇಕು. ಈ ಕುರಿತಂತೆ

ಸರ್ಕಾರವು ರೈತರೊಂದಿಗಾಗಲಿ ಅಥವಾ ರೈತ ಸಮುದಾಯದ ಮುಖಂಡರೊಂದಿಗಾಗಲಿ ಸಮಾಲೋಚನೆ ನಡೆಸುವ ಪ್ರಯತ್ನಗಳು ನಡೆದಿರಲಿಲ್ಲ. ಏಕಾಏಕೀ ಸರ್ಕಾರವೇ ನಿರ್ಧಾರ ಕೈಗೊಂಡು ರೈತರ ಮೇಲೆ ಹೇರುವ ಪ್ರಯತ್ನ ಇದಾಗಿದ್ದಿತು.

ರೈತರಿಗೆ ಈ ಹೊಸ ಪದ್ಧತಿಯ ಅನುಕೂಲತೆಗಳು ಮತ್ತು ನೀರಾವರಿ ಕಾಮಗಾರಿಗಾಗಿ ವೆಚ್ಚ ಮಾಡಿದ ಅಪಾರ ಹಣದ ಪಾಲನ್ನು ಫಲಾನುಭವಿಗಳಿಂದ ಪಡೆಯುವ ಆಶಯ ಮೇಲ್ನೋಟಕ್ಕೆ ಸರಿ ಎನಿಸಿದರು ರೈತರ ಪಾವತಿ ಶಕ್ತಿ ಸಾಮಾರ್ಥ್ಯಗಳನ್ನು ಪರಿಗಣಿಸದೇ ಹೋದದ್ದು ಶೋಚನಿಯವೆನಿಸುತ್ತದೆ. ಒಂದು ವೇಳೆ ನೀರಾವರಿ ಸೌಲಭ್ಯ ಪಡೆದು ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮ ಪಡಿಸಿಕೊಂಡ ನಂತರದ ಕಾಲಘಟ್ಟದಲ್ಲಿ ಈ ಕ್ರಮಗಳನ್ನು ಹಂತಹಂತವಾಗಿ ಜಾರಿಗೊಳಿಸಿದ್ದರೆ ರೈತರು ಇದನ್ನು ಒಪ್ಪಿಕೊಳ್ಳತ್ತಿದ್ದರೋ ಏನೋ?

## 5.3 ಚಳವಳಿಯ ಮೊದಲ ಪ್ರಯತ್ನಗಳು.

ಸರ್ಕಾರಿ ಅಜ್ಞೆಯಿಂದ ರೈತರಿಗಾಗುವ ತೊಂದರೆಗಳನ್ನು ತಮ್ಮಿಂದ ಆಯ್ಕೆಯಾದ ಪ್ರಜಾಪ್ರತಿನಿಧಿಗಳು ತಿಳಿಸಿ ಮನವರಿಕೆ ಮಾಡುವ ಪ್ರಯತ್ನಗಳು ನಡೆದರೂ, ಅದರಿಂದ ಯಾವುದೇ ಫಲಸಿಗಲಿಲ್ಲ. ಕಾನಕಾನಹಳ್ಳಿಯಲ್ಲಿ ನಡೆದ ರೈತರ ಮಹಾ ಸಭೆಯಲ್ಲಿ ಸರ್ಕಾರದ ಈ ಕ್ರಮಗಳಿಂದ ರೈತರು ಕಷ್ಟಕೊಳ್ಳಗಾಗುತ್ತಾರೆ ಎಂದು ಪ್ರತಿನಿಧಿಗಳು ತಮ್ಮ ಅಹವಾಲನ್ನು ತಿಳಿಸಿದರು ಈ ಮಧ್ಯೆ ಸರ್ಕಾರದ ದಾಕ್ಷಿಣ್ಯಕ್ಕೆ ಒಳಗಾಗಿದ್ದ ಪ್ರಜಾಪ್ರತಿನಿಧಿಗಳು ಮತ್ತೆ ರೈತರ ಪರವಾಗಿ ಮಾತನಾಡದೇ ಹೋದಾಗ, ನಾಲಾ ಪ್ರದೇಶದಲ್ಲಿ ಚಳವಳಿಯ ಬಿಸಿ ಪ್ರಾರಂಭವಾಗತೊಡಗಿತ್ತು.

ಈ ಸಂದರ್ಭದಲ್ಲಿ ನಾಲಾ ಪ್ರದೇಶದ ರೈತರಿಗೆ ಸರ್ಕಾರದ ಈ ಕ್ರಮಗಳಿಂದ ನಾವು ತೊಂದರೆಗೊಳಗಾಗುತ್ತೇವೆ ಎಂಬ ಅರಿವಿತ್ತೇ ? ಇದರಿಂದ ಸ್ವಂಯ ಪ್ರೇರಣೆಯಿಂದ ಈ ಕ್ರಮವನ್ನು ವಿರೋಧಿಸಿದರೆ? ಅಥವಾ ಇದರ ವಿರುದ್ಧ ಸಂಘಟಿತ ಹೋರಾಟ ನಡೆಸುವ

ಜಾಯಮಾನದವರಾಗಿದ್ದಾರೆ? ಎಂಬ ಪ್ರಶ್ನೆಗಳು ಉದ್ಭವಿಸುವುದು ಸಹಜ. ಹಾಗಾಗಿ ರೈತರನ್ನು ಸಂಘಟಿಸಿ ಅವರಿಗೆ ಸರ್ಕಾರದ ಕ್ರಮಗಳ ತೊಂದರೆಗಳನ್ನು ವಿವರಿಸಿ ಅವರನ್ನು ಸಂಘಟಿಸುವ ಪ್ರಯತ್ನವನ್ನು ಅಚ್ಚುಕಟ್ಟು ಪ್ರದೇಶದ ಕೆಲವೇ ಮಂದಿ ನಾಯಕರು ವಹಿಸಿ ಕೊಂಡಿರಬೇಕೆನಿಸುತ್ತದೆ. ಈ ನಾಯಕರುಗಳು ಯಾವುದೇ ಸೈದ್ಧಾಂತಿಕ ಹೋರಾಟದ ಹಿನ್ನಲೆ ಹೊಂದಿರಲಿಲ್ಲ. ವೈಚಾರಿಕ ಪಂಥಗಳ ಪ್ರಭಾವವೂ ಇರಲಿಲ್ಲ. ಆದರೂ ರೈತರು ಸಂಕಷ್ಟದಲ್ಲಿ ಸಿಲುಕಿದಾಗ ಅವರ ಮುಕ್ತಿಗಾಗಿ ಇವರು ಚಳವಳಿಯ ಹಾದಿ ಹಿಡಿಯಬೇಕಾಯಿತು. ವಿದ್ಯಾವಂತರಾಗಿದ್ದು ಶಿಕ್ಷಕರಾಗಿ ಸೇವೆಸಲ್ಲಿಸುತ್ತಿದ್ದ ಹೊನಗಾನಹಳ್ಳಿಯ ಕೆ. ಪುಟ್ಟಣ್ಣನವರು, ಇಂಡುವಾಳು ಹೊನ್ನಯ್ಯನವರು, ಹೊಳಲಿನ ಅಣ್ಣೇಗೌಡರು, ಗಾಣದಾಳಿನ ಶಿವಲಿಂಗೇಗೌಡರು, ಪಣಕನಹಳ್ಳಿ ಸಿದ್ದೇಗೌಡರು, ಜೆ.ದೇವಯ್ಯನವರು, ಕೆಂಪೇಗೌಡರು, ಮೊದಲಾದ ರೈತ ಪರ ಕಾಳಜಿ ವಹಿಸುವ ಮುಖಂಡರನ್ನು ಜೊತೆಗೂಡಿಸಿಕೊಂಡು ಸರ್ಕಾರದ ವಿರುದ್ಧ ಪ್ರತಿಭಟಿಸಿ ರೈತರ ಸಮಸ್ಯೆಗಳನ್ನು ಬಗೆಹರಿಸಲು ಹೋರಾಟದ ನಾಯಕತ್ವವನ್ನು ವಹಿಸಿಕೊಂಡರು. ಇವರುಗಳ ಜೊತೆಗೆ ಈಗಾಗಲೇ ರಾಜಕೀಯದಲ್ಲಿ ಅನುಭವ ಪಡೆದು ಸಾರ್ವಜನಿಕ ಕ್ಷೇತ್ರಗಳಲ್ಲಿ ನಾಯಕರಾಗಿ ಹೆಸರುವಾಸಿ ಆಗಿದ್ದ ಹೆಚ್.ಕೆ. ವೀರಣ್ಣಗೌಡರನ್ನು ತಮ್ಮ ಮುಖಂಡರಾಗಿ ಮಾಡಿಕೊಂಡರು. ವೀರಣ್ಣಗೌಡರು ರೈತರ ಸಮಸ್ಯೆಗಳನ್ನು ಕೇಳಿ ನೆರವು ಬಯಸಿ ಬಂದ ಗೆಳಯರ ಭಾವನೆಗಳಿಗೆ ಸ್ಪಂದಿಸಿದರು. ಹೀಗಾಗಿ ಇವರುಗಳ ನೇತೃತ್ವದಲ್ಲಿ ಚಳವಳಿ ಪ್ರಾರಂಭಗೊಂಡಿತು.

## 5.4 ರೈತರ ಬೇಡಿಕೆಗಳು :

1. ಬ್ಲಾಕ್ ಪದ್ದತಿ ಬೆಳೆ ಬದಲು ಯಾವಾಗ ಬೇಕಾದರೂ ಯಾವುದೇ ಬೆಳೆ ಬೆಳೆಯಲು ರೈತರಿಗೆ ಅವಕಾಶ ನೀಡಬೇಕು.

2. ನರಸಿಂಹಯ್ಯಂಗಾರ್ ವರದಿ ಜಾರಿ ಮಾಡಬೇಕು.

3. ವಂತಿಕೆ ಹಣದ ಮೇಲಿನ ಬಡ್ಡಿ ವಜಾ ಮಾಡಿ 10 ವರ್ಷಗಳ ಅವಧಿಯಲ್ಲಿ ಕಂತಿನ ಮೇಲೆ ವಂತಿಕೆ ಹಣ ಸಲ್ಲಿಸಲು ಅವಕಾಶ ಕೊಡಬೇಕು.

ನ್ಯಾಯ ವಿಧಾಯಕ ಸಭೆಯ ಸದಸ್ಯ ಡಿ.ಎಸ್. ಮಾದಪ್ಪನವರ ಮೂಲಕ ಈ ನಾಯಕರು ನರಸಿಂಹಯ್ಯಂಗಾರರ ವರದಿಯ ಉಪಯುಕ್ತ ಅಂಶಗಳನ್ನು ಸರ್ಕಾರ ಒಪ್ಪಿ ಜಾರಿಗೊಳಿಸಬಾರದೇಕೆ? ಎಂದೂ ಪ್ರಶ್ನಿಸಲಾಯಿತು. ಅಂತಹ ವರದಿಯೇ ತಮ್ಮಲಿಲ್ಲ ಎಂದು ಸರ್ಕಾರ ಸುಳ್ಳು ಹೇಳಿತು. [11]

ನರಸಿಂಹಯ್ಯಂಗಾರ ವರದಿ ರೈತರ ಪರವಾಗಿದ್ದರೂ ಸಹ ಸರ್ಕಾರ ಅದನ್ನು ಗಂಭೀರವಾಗಿ ಪರಿಗಣಿಸದೆ ಉಪೇಕ್ಷಿಸಿ ರೈತರಿಂದ "ವಂತಿಕೆ" ಪಡೆಯುವ ಮತ್ತು "ಬ್ಲಾಕ್ ಸಿಸ್ಟಂ"ನ್ನು ಜಾರಿಗೊಳಿಸಲು ಹಠ ಹಿಡಿಯಿತು. ಚಳವಳಿಯನ್ನು ಹತ್ತಿಕ್ಕುವ ಪ್ರಯತ್ನವಾಗಿ ಚಳವಳಿ ಸಂದರ್ಭದಲ್ಲಿ ರೈತ ಸಮುದಾಯದ ನಾಯಕರಿಗೆ ವರದಿ ಇಲ್ಲವೆಂದು ಸುಳ್ಳು ಹೇಳುವ ಮೂಲಕ ತನ್ನತನವನ್ನು ಮೆರೆಯಿತು. ಹೆಚ್.ಕೆ. ವೀರಣ್ಣಗೌಡರು, ಸರ್ಕಾರ ರಹಸ್ಯವಾಗಿಟ್ಟಿದ್ದ ರೈತ ಉಪಯೋಗಿ ಆಗಿದ್ದ ನರಸಿಂಹಯ್ಯಂಗಾರರ 72 ಪುಟಗಳ ವರದಿಯನ್ನು ಎಕ್ಸಿಕ್ಯುಟಿ ಇಂಜಿನಿಯರ್ ಆಫೀಸಿನಲ್ಲಿದ್ದ ಎಂ.ಎಲ್.ಲಿಂಗಣ್ಣನವರಿಂದ ಉಪಾಯವಾಗಿ ತರಿಸಿಕೊಂಡು ರೈತರ ಸಭೆಯಲ್ಲಿ ಮಂಡಿಸಿದಾಗ [12] ಸರ್ಕಾರಕ್ಕೆ ಮುಖಭಂಗವಾಯಿತು.

## 5.4 ಸಂಪನ್ಮೂಲ ಸಂಗ್ರಹ

ಸರ್ಕಾರದ ಆಜ್ಞೆಯಿಂದ ರೈತರು ಎದುರಿಸಬೇಕಾಗುವ ಕಷ್ಟ ನಷ್ಟಗಳನ್ನು ಕುರಿತು ನಾಲಾ ಪ್ರದೇಶದ ಎಲ್ಲಾ ತಾಲ್ಲೂಕುಗಳ ಪ್ರತಿ ಹಳ್ಳಿಗೂ ಹೋಗಿ ರೈತರಿಗೆ ತಿಳುವಳಿಕೆ ಹೇಳುವುದು. ಈ ವಿಷಯ ಕುರಿತು ಅಂಕಿ ಅಂಶಗಳನ್ನೊಳಗೊಂಡ ಒಂದು ಪ್ರಕಟಣೆ ಹೊರಡಿಸುವುದು ಎಂದು ರೈತ ನಾಯಕರು ನಿರ್ಧರಿಸಿದರು. ಹೀಗೆ ರೈತರನ್ನು ಸಂಘಟಿಸಲು ಹಣದ ಅವಶ್ಯಕತೆ ಇದ್ದು, ಅದನ್ನು ಹೇಗೆ ಸಂಗ್ರಹಿಸುವುದು? ಎಂಬ ಪ್ರಶ್ನೆ ಕಾಡಲಾರಂಭಿಸಿತು. ಹೋರಾಟಕ್ಕೆ

ಹಣಬೇಕಾಗಿದ್ದು ಅದನ್ನು ರೈತರಿಂದ ಪಡೆದರೆ ಅದು ಪ್ರತಿಕೂಲ ಪರಿಸ್ಥಿತಿಯನ್ನು ಉಂಟುಮಾಡಬಹುದು ಎಂಬ ಕಾರಣದಿಂದ ಜನರಿಂದ ಚಂದಾ ಕೇಳಕೂಡದೆಂದು ನಿರ್ಧರಿಸಿದರು. ಆಗ ಇಂಡುವಾಳು ಹೊನ್ನಯ್ಯನವರು ಹೊಸ ಮನೆ ಕಟ್ಟಿಸಲೆಂದು ಸ್ವಲ್ಪ ಹಣ ಇಟ್ಟುಕೊಂಡಿದ್ದು ಆ ಹಣವನ್ನು ಈ ಹೋರಾಟದ ವೆಚ್ಚಕ್ಕೆ ಕೊಡುವುದಾಗಿಯೂ, ನಂತರ ಮರಳಿ ಹಿಂದಕ್ಕೆ ಕೊಟ್ಟರಾಯಿತು ಎಂದು ತಿಳಿಸಿದರು. ಈ ಹಣವನ್ನು ಮಂಡ್ಯ ಸಹಕಾರಿ ಸಂಘದಲ್ಲಿ ಠೇವಣಿ ಮಾಡಿ, ಅಗತ್ಯವಾದಾಗ ಅಗತ್ಯವಾದಷ್ಟು ಹಣವನ್ನು ಹೊನ್ನಯ್ಯನವರೂ, ಪುಟ್ಟಣ್ಣನವರೂ ರುಜುಮಾಡಿ ಪಡೆಯಬೇಕೆಂದು ತೀರ್ಮಾನಿಸಿದರು.[13]

## 5.5 ಚಳವಳಿ ಪೂರ್ವ ತಯಾರಿ ಹಾಗೂ ಪ್ರಚಾರ :

ನಾಯಕರು ಸರ್ಕಾರಿ ಆಜ್ಞೆಯಿಂದ ರೈತರು ಹೇಗೆ ತೊಂದರೆಗೆ ಸಿಲುಕುತ್ತಾರೆ ಎಂದು ಅವರಿಗೆ ಮನವರಿಗೆ ಮಾಡಿಕೊಟ್ಟು ಅವರನ್ನು ಹೋರಾಟಕ್ಕೆ ಸಿದ್ಧಗೊಳಿಸಲು ಜಿಲ್ಲೆಯ ಪ್ರತಿ ತಾಲ್ಲೂಕಿನಲ್ಲೂ ಪ್ರಚಾರ ಕಾರ್ಯಗಳನ್ನು ಕೈಗೊಂಡರು. ನಾಯಕರು ಜಾತ್ರೆಗಳನ್ನು ಸಂತೆ ನಡೆಯುವ ಗ್ರಾಮಗಳನ್ನು ಪ್ರಚಾರ ಕೇಂದ್ರವನ್ನಾಗಿ ಮಾಡಿಕೊಂಡು ರೈತರೊಂದಿಗೆ ಸಂವಾದ ಆರಂಭಿಸಿ, "ಬ್ಲಾಕ್ ಸಿಸ್ಟಂ" ಹಾಗೂ "ವಂತಿಕೆ"ಯ ಲೋಪದೋಷಗಳನ್ನು ಜನಸಾಮಾನ್ಯರಿಗೆ ಮನವರಿಗೆ ಮಾಡಿಕೊಟ್ಟು, ಆ ಮೂಲಕ ಜನರನ್ನು ಹೋರಾಟಕ್ಕೆ ಸಜ್ಜುಗೊಳಿಸುವ ಪ್ರಕ್ರಿಯೆ ಪ್ರಯತ್ನ ಅತ್ಯಂತ ವ್ಯವಸ್ಥಿತವಾಗಿ ನಡೆಯಿತು. ಪ್ರಾಯಶಃ ಈ ರೈತ ನಾಯಕರಿಗೆ ಈಗಾಗಲೇ ರಾಜ್ಯದಲ್ಲಿ ಪ್ರಾರಂಭಗೊಂಡಿದ್ದ ಸ್ವಾತಂತ್ರ್ಯ ಚಳವಳಿಗೆ ಸ್ವಾತಂತ್ರ್ಯ ಹೋರಾಟದ ನಾಯಕರು ಜಾತ್ರೆ ಸಂತೆಗಳನ್ನು ಪ್ರಚಾರ ಸಾಧನವಾಗಿ ಬಳಸಿ ಕೊಳ್ಳುತ್ತಿದ್ದ ಕ್ರಮ ಸ್ಫೂರ್ತಿ ನೀಡಿರಬಹುದು!

ಹಣದ ವ್ಯವಸ್ಥೆಯಾದ ನಂತರ ಪ್ರಚಾರ ಸಭೆ ನಡೆಯುವ ಸ್ಥಳಗಳಿಗೆ ಹೋಗುವ ವ್ಯವಸ್ಥೆ ಕುರಿತು ಚರ್ಚಿಸಿದರು. ಸಭೆಯಲ್ಲಿ ಹಳ್ಳಿಯಿಂದ ಹಳ್ಳಿಗೆ ರೈತರು ಎತ್ತಿನ ಗಾಡಿಗಳನ್ನು ಕಟ್ಟಿಸಿಕೊಡುವಂತೆ ಏರ್ಪಡಿಸಬಹುದೆಂಬ ಸಲಹೆ ನೀಡಿದರು. ಆದರೆ ಈ ಸಲಹೆಯನ್ನು ಒಪ್ಪದ

ವೀರಣ್ಣಗೌಡರು ನಾವು ಯಾವ ಹಳ್ಳಿಗೆ ಹೋದರು ಊಟದ ವ್ಯವಸ್ಥೆಯನ್ನು ಹಳ್ಳಿಗರು ಮಾಡಿರುತ್ತಾರೆ. ಅದರ ಜೊತೆಗೆ ನಮ್ಮ ಪ್ರಯಾಣಕ್ಕಾಗಿ ಗಾಡಿಗಳನ್ನು ಕಟ್ಟಿಸುವಂತೆ ರೈತರನ್ನು ಕೇಳುವುದು ಅಪಪ್ರಚಾರಕ್ಕೆ ಅವಕಾಶ ಮಾಡಿಕೊಟ್ಟಂತಾಗುತ್ತದೆ, ಎಂದು ಆಕ್ಷೇಪಿಸಿದರು. ಬಿಟ್ಟಿ ಊಟ, ಬಿಟ್ಟಿ ಗಾಡಿ ಪ್ರಯಾಣ ಸಿಗುವುದರಿಂದ ಕೆಲಸವಿಲ್ಲದ ನಾಲ್ಕಾರು ಜನರು ರೈತರನ್ನು ತಪ್ಪು ದಾರಿಗೆ ಎಳೆಯುವ ಕಾರ್ಯದಲ್ಲಿ ತೊಡಗಿದ್ದಾರೆಂದು ವಿರೋಧ ಪಕ್ಷದವರು ಮಾತನಾಡಿಕೊಳ್ಳಲು ತಾವೇ ಅವಕಾಶ ಮಾಡಿಕೊಟ್ಟಂತಾಗುತ್ತದೆ ಎಂದು ಹೇಳಿ ಗಾಡಿ ವ್ಯವಸ್ಥೆಯನ್ನು ತಿರಸ್ಕರಿಸಿ, ಎಲ್ಲರೂ ಹಳ್ಳಿಗಳಿಗೆ ನಡೆದೇ ಹೋಗಬೇಕೆಂದು ತೀರ್ಮಾನಿಸಿದರು. ಅದರಂತೆ ಮೊದಲ ಪ್ರಚಾರ ಸಭೆ ಮಳವಳ್ಳಿ ತಾಲ್ಲೂಕು ಮತ್ತಿತಾಳೇಶ್ವರ ತೋಪಿನಲ್ಲಿ ಚನ್ನೇಗೌಡರ ಅಧ್ಯಕ್ಷತೆಯಲ್ಲಿ ಆರಂಭಗೊಂಡಿತು. ಅನಂತರ ಚಿಕ್ಕರಸಿನಕೆರೆ, ಗೆಜ್ಜಲಗೆರೆ, ಗೌಡಗೆರೆ, ಹೊಳಲು, ಕೆರಗೋಡು, ಮದ್ದೂರು, ಮಂಡ್ಯ, ಮಳವಳ್ಳಿ, ಶ್ರೀರಂಗಪಟ್ಟಣ, ಫ್ರೆಂಚ್‌ರಾಕ್ಸ್ (ಪಾಂಡವಪುರ) ಮುಡುಕುತೊರೆ ಜಾತ್ರೆ, ಚುಂಚನಕಟ್ಟೆ ಜಾತ್ರೆ, ಮುಂತಾದ ಕಡೆ ಸುಮಾರು ಹದಿನಾಲ್ಕು ತಿಂಗಳುಗಳ ಕಾಲ ನೂರಾರು ಪ್ರಚಾರ ಸಭೆಗಳನ್ನು ಏರ್ಪಡಿಸಿ ರೈತರ ಕಷ್ಟ ನಿಷ್ಠೂರಗಳಿಗೆ ಸರ್ಕಾರದ ಗಮನ ಸೆಳೆಯುವಂತೆ ಪರಿಹಾರಕ್ಕೆ ಒತ್ತಾಯಿಸುವಂತೆ ರೈತರಲ್ಲಿ ಅರಿವನ್ನುಂಟು ಮಾಡಲಾಯಿತು. [14]

ಸರ್ಕಾರ ರೈತರ ಈ ಪ್ರಯತ್ನಗಳಿಗೆ ನಿರ್ಲಕ್ಷ್ಯ ತೋರಿದಾಗ ಮುಂದಿನ ಹೋರಾಟದ ಬಗ್ಗೆ ನಿರ್ಧಿಷ್ಟ ಕಾರ್ಯಕ್ರಮಗಳ ಬಗ್ಗೆ ನಿರ್ಧಾರ ಕೈಗೊಳ್ಳಲು ಗೆಜ್ಜಲಗೆರೆಯಲ್ಲಿ ಬೃಹತ್ ಸಭೆ ಸೇರಿತು. 1931ರ ಡಿಸೆಂಬರ್ 31 ರಂದು ಮದ್ದೂರಿನಿಂದ ಸುಮಾರು ನಾಲ್ಕು ಸಾವಿರ ಮಂದಿ ರೈತರು ಕಾಲ್ನಡಿಗೆ ಮೂಲಕ ಹೊರಟು ಜನವರಿ 4ನೇ ತಾರೀಖು ಮಧ್ಯಾಹ್ನ 2 ಗಂಟೆಗೆ ಬೆಂಗಳೂರಿನ ದಿವಾನ್ ಕಛೇರಿ ತಲುಪುವ ನಿರ್ಣಯ ಕೈಗೊಳ್ಳಲಾಯಿತು. ಈ ಜಾಥಾ ವಿಷಯವಾಗಿ ದಿವಾನರಿಗೆ ಪತ್ರ ಬರೆದು ಅನುಮತಿ ಪಡೆಯಲಾಗಿತ್ತು ಜೊತೆಗೆ ಜಾಥಾ ಸಂದರ್ಭದಲ್ಲಿ ಅನುಸರಿಸಬೇಕಾದ ನಿಯಮಗಳನ್ನು ರೂಪಿಸಲಾಯಿತು. ಹೊನ್ನಯ್ಯನವರು,

ಪುಟ್ಟಣನವರೂ ಮುಂಚಿತವಾಗಿ ಕಾಲ್ನಡಿಗೆಯಲ್ಲಿ ಬೆಂಗಳೂರಿಗೆ ಹೋಗಿ ಯಾವ ಯಾವ ಸ್ಥಳದಲ್ಲಿ ಹಗಲು ರಾತ್ರಿ ಬಿಡಾರ ಮಾಡಬೇಕೆಂಬುದನ್ನು ಅನುಭವದಿಂದ ತಿಳಿದು ಕೊಂಡು ಬಂದಿದ್ದರು.

## 5.6 ಜಾಥಾ ಸಂದರ್ಭದಲ್ಲಿ ರೈತರು ಅನುಸರಿಸಬೇಕಾಗಿದ್ದ ನಿಯಮಗಳು

1. ನಾಲಾ ಪ್ರದೇಶದಲ್ಲಿರುವ ಪ್ರತಿ ಗ್ರಾಮದಿಂದಲೂ ರೈತರು ಆಯಾ ಗ್ರಾಮದಿಂದ ಜನಸಂಖ್ಯೆಗನುಸಾರವಾಗಿ ಹೊರಡಬೇಕು.

2. ಆಯಾ ಗ್ರಾಮದಿಂದ ಹೊರಡುವ ರೈತರು ಜನಸಂಖ್ಯೆಗನುಸಾರವಾಗಿ ಒಂದೋ ಎರಡೋ ಎತ್ತಿನಗಾಡಿಗಳನ್ನು ಕಟ್ಟಿಕೊಂಡು ಅವುಗಳಲ್ಲಿ ಎಂಟು ದಿನಗಳಿಗೆ ತಮ್ಮ ವರಿಗೆ ಬೇಕಾದ ಆಹಾರಪದಾರ್ಥಗಳು, ಸೌದೆ, ಪಾತ್ರೆ, ಮುಂತಾದವುಗಳನ್ನು ತುಂಬಿಕೊಳ್ಳಬೇಕು. ದಾರಿಯಲ್ಲಿ ಯಾರಿಗಾದರೂ ಖಾಯಿಲೆಯಾದರೆ ಅಥವಾ ಮುದುಕರು ಮುಂತಾದವರು ಇದ್ದರೆ ಅಂಥವರಿಗೆ ಒಂದೊಂದು ಗಾಡಿಯಲ್ಲಿ ಒಬ್ಬೊಬ್ಬರನ್ನು ಕೂರಿಸಿಕೊಳ್ಳಲು ಸ್ಥಳವಿರಬೇಕು.

3. ಪ್ರಯಾಣ ಮಾಡುವಾಗ ರಸ್ತೆಯ ಎಡಗಡೆ ಪಕ್ಕದಲ್ಲೇ ಇಬ್ಬಿಬ್ಬರಂತೆ ಶಿಸ್ತಿನಿಂದ ಸಾಲಾಗಿ ನಡೆಯ ಬೇಕು.

4. ದಾರಿಯಲ್ಲಿ ತಾಂಬೂಲ ಉಗುಳುವುದು ಮುಂತಾದ ಹೊಲಸು ಮಾಡಬಾರದು.

5. ರಸ್ತೆಯಲ್ಲಿ ಹೋಗಿಬರುವ ಗಾಡಿ, ಲಾರಿ, ಕಾರು ಮುಂತಾದವುಗಳಿಗೆ ಸ್ವಲ್ಪವೂ ಅಡ್ಡಿಯಾಗದಂತೆ ರಸ್ತೆಯ ಎಡಗಡೆ ಮಾತ್ರ ನಡೆಯಬೇಕು. ಯಾರು ಸಾಲು ಬಿಟ್ಟು ಕದಲಬಾರದು ಹಾಗೂ ಇಬ್ಬರಿಗಿಂತ ಹೆಚ್ಚಾಗಿ ಒಂದು ಸಾಲಿನಲ್ಲಿ ಸೇರಬಾರದು.

6. ದಾರಿಯಲ್ಲಿ ಸಿಕ್ಕುವ ಪಟ್ಟಣಗಳಲ್ಲಿ ಎಲೆ, ಅಡಿಕೆ, ಬೀಡಿ ಸಿಗರೇಟು ಮುಂತಾದವುಗಳನ್ನು ಕೊಳ್ಳುವ ನೆಪದಿಂದ ಯಾರು ಸಾಲು ಬಿಟ್ಟು ಹೋಗಬಾರದು. ತಮಗೆ ಬೇಕಾದ ಅಂತಹ ಎಲ್ಲಾ ಪದಾರ್ಥಗಳನ್ನು ಪ್ರಯಾಣಿಕರ ಜೊತೆಯಲ್ಲಿ ಇರುವ ಗಾಡಿಯೊಂದರ ಅಂಗಡಿಯಲ್ಲೇ ಬಿಡಾರ ಮಾಡುವ ಸ್ಥಳ ಮತ್ತು ಕಾಲದಲ್ಲಿ ಕೊಂಡುಕೊಳ್ಳಬೇಕು.

7. ಅದೇ ರೀತಿ ಬಿಡಾರ ಹೂಡುವ ಕಾಲದಲ್ಲಿ ಮಾತ್ರ ರಸ್ತೆಗೆ ದೂರವಾಗಿ ಹೋಗಿ ಜಲ ಮಲ ಬಾದೆಗಳನ್ನು ನಿವಾರಿಸಿಕೊಳ್ಳಬೇಕೇ ವಿನಃ ರಸ್ತೆಯ ಪಕ್ಕದಲ್ಲಿ ಕೊಳಕು ಮಾಡಲು ಅವಕಾಶ ಕೊಡಬಾರದು. [15]

ಇವೇ ಮೊದಲಾದ ನಿಯಮಾವಳಿಗಳನ್ನು ಅಚ್ಚು ಹಾಕಿಸಿ ಸಾವಿರಾರು ಪ್ರತಿಗಳನ್ನು ನಾಲಾ ಪ್ರದೇಶದ ಹಳ್ಳಿಗಳಿಗೆಲ್ಲಾ ಹಂಚಲಾಯಿತು. ಬೆಂಗಳೂರಿಗೆ ಜಾಥಾ ಹೊರಡುವವರೆಲ್ಲಾ 1931 ಡಿಸೆಂಬರ್ 31 ರಂದು ಉಪವಾಸವಿದ್ದು ಸ್ನಾನಮಾಡಿಕೊಂಡು ತಮ್ಮ ಗ್ರಾಮಗಳಲ್ಲಿರುವ ದೇವಸ್ಥಾನಗಳಿಗೆ ಹೋಗಿ ನಮ್ಮ ಕಷ್ಟಗಳು ಪರಿಹಾರವಾಗುವಂತೆ ಕರುಣಿಸಬೇಕೆಂದು ದೇವರನ್ನು ಪ್ರಾರ್ಥಿಸಿಕೊಂಡು ಆ ದಿನ ಸಾಯಂಕಾಲ 7 ಗಂಟೆಗೆ ಮದ್ದೂರು ಸೇತುವೆ ಬಳಿ ಸೇರಬೇಕೆಂದು ರೈತ ನಾಯಕರು ತಿಳಿಸಿದ್ದರು.

ಆದರೆ ರೈತರ ಈ ಬೆಂಗಳೂರು ಜಾಥಾವನ್ನು ತಡೆಯುವುದಕ್ಕಾಗಿ ರೈತರನ್ನು ಹೆದರಿಸಿ ದಿವಾನರು ಆದಿನ (ಜನವರಿ 4 1932) ಬೆಂಗಳೂರಿನಲ್ಲಿ ಇರುವುದಿಲ್ಲವೆಂದು ಸುಳ್ಳು ಹೇಳಿ ಮಂಡ್ಯ ಪೊಲೀಸ್ ಅಧಿಕಾರಿಗಳು ಮ್ಯಾಜಿಸ್ಟ್ರೇಟರು ಇನ್ನಿತರ ಅಧಿಕಾರಿಗಳು ಮುಂತಾದವರು ಪೊಲೀಸ್ ಕಾನ್‌ಸ್ಟೇಬಲ್‌ಗಳ ಗುಂಪನ್ನು ಮದ್ದೂರು ಸೇತುವೆ ಬಳಿ ಸೇರಿಸಿದ್ದರು.

"ತಾನೊಂದೆಣಿಸಿದರೆ ದೈವ ತಾ ಬೇರೊಂದೆಣಿಸುವುದು" ಎಂಬ ಗಾದೆಯಂತೆ ಅಧಿಕಾರಿಗಳ ಕುಹುಕ ವ್ಯವಸ್ಥೆ ಅವರಿಗೆ ತಿರುಗೇಟು ನೀಡಿತು. ಪೊಲೀಸರು ಸೇತುವೆ ಬಳಿ ಕಾಯುತ್ತಿದ್ದಾರೆ ಎಂಬ ವಿಷಯ ಚಳವಳಿಗಾರರಿಗೆ ತಿಳಿದಿರಲಿಲ್ಲ, ಆದರೆ ಮದ್ದೂರು ಸೇತುವೆಗೆ ಹತ್ತಿರವಾಗಿರುವ

ಕೆಲವು ಗ್ರಾಮಗಳಲ್ಲಿ ಕಾಲರಾ ಇದೆಯೆಂದು ರೈತರಿಗೆ ತಿಳಿಸಿ ಅವರುಗಳು ಮದ್ದೂರು ಸೇತುವೆಗೆ ಬದಲು ಕೋಡಿಹಳ್ಳಿ ಗುಂಡು ತೋಪಿನಲ್ಲಿ ಸೇರಬೇಕೆಂದು ತಿಳಿಸಲಾಗಿ ರೈತರು ಸಂಜೆಯಾಗುತ್ತಲೇ ಗಾಡಿಗಳ ಸಮೇತ ಬಂದು ಸೇರಿದರು. ಇತ್ತ ವೀರಣ್ಣಗೌಡರ ಮಾತಿಗೆ ಬೆಲೆ ಕೊಟ್ಟು ರೈತರು ಹೋರಾಟಕ್ಕೆ ಬರುತ್ತಾರೆಯೇ? ಎಂದು ಕುಹಕವಾಡುತ್ತಿದ್ದ ಅಧಿಕಾರಿಗಳಿಗೆ ಮುಖಭಂಗವಾಗಿ ಹಿಂತಿರುಗಿದ್ದರು.[16]

ಮೊದಲೇ ತೀರ್ಮಾನಿಸಿದ ನಿಯಮಗಳಂತೆಯೇ ಸಾಗಿದ ಈ ಜಾಥಾ ಪ್ರತಿದಿನ 25 ಕಿ.ಮೀ. ಗಳವರೆಗೆ ಪ್ರಯಾಣ ಮಾಡುವುದು. ಆ ನಂತರ ಪೂರ್ವ ನಿಗಧಿತ ಸ್ಥಳದಲ್ಲಿ ತಂಗುವುದು ನಂತರ ಪ್ರಯಾಣ ಬೆಳೆಸುವುದು ಹೀಗೆ ಸಾಗಿತ್ತು. ಈ ಜಾಥಾದಲ್ಲಿ ಭಾಗವಹಿಸಿದ್ದವರಿಗೆಲ್ಲಾ ಮಂಡ್ಯದ ಪಿ.ವೆಂಕಟಗಿರಿಯಯ್ಯ ಎಂಬುವರು ಎಲೆ, ಅಡಿಕೆ, ಹೊಗೆ ಸೊಪ್ಪು, ಬೀಡಿ, ಸಿಗರೇಟು, ಬೆಂಕಿಪೆಟ್ಟಿಗೆ, ಬ್ರೆಡ್, ಬಿಸ್ಕತ್ ಹೊಂದಿದಂತಹ ಅಂಗಡಿಯುಳ್ಳ ಗಾಡಿಯನ್ನು ಹೊಂದಿದ್ದು ಜಾಥದಲ್ಲಿ ಭಾಗವಹಿಸಿದ್ದು ಈ ಗಾಡಿಯಿಂದಲೇ ಖರೀದಿಸಬೇಕಾಗಿತ್ತು. ಸಾಲುನಡಿಗೆಯ ಶಿಸ್ತು ನಿರ್ವಹಿಸಲು ಮಲ್ಲಿಗೆರೆ ಪಾಪಣ್ಣನವರ ನೇತೃತ್ವದ ನೂರು ಮಂದಿ ಸೈಕಲ್ ಸವಾರರು ಜೊತೆಗಿದ್ದರು.



ಚನ್ನಪಟ್ಟಣದಲ್ಲಿ ದಾಟಿ ಹೋಗುವಾಗ ರೈತರ ಶಿಸ್ತು ನಿರ್ವಹಣೆ ಕಂಡು ಮೈಸೂರಿಗೆ ಕಾರಿನಲ್ಲಿ ಹಿಂತಿರುಗುತ್ತಿದ್ದ ಮೈಸೂರು ಜಿಲ್ಲಾಧಿಕಾರಿ ಅಬ್ದುಲ್ ವಾಜೀದ್ ಅವರು ನೋಡಿ ಸಂತೋಷಪಟ್ಟು ದಿವಾನರಿಗೂ ತಿಳಿಸಿದರು. ಅದು ದಿವಾನರಿಗೂ ಮೆಚ್ಚುಗೆ ಆಗಿತ್ತೆಂದು ತಿಳಿಯಿತು.[17] ಚಳವಳಿ ಸಾರ್ವತ್ರಿಕವಾಗಿತ್ತು ಎಂಬುದಕ್ಕೆ ಕುರುಡರು, ವಯೋವೃದ್ಧ ಮಹಿಳೆಯರು, ಸಹ ಸಕ್ರಿಯವಾಗಿ ಕಾಲ್ನಡಿಗೆ ಮೂಲಕ ಚಳವಳಿಯಲ್ಲಿ ಭಾಗವಹಿಸಿದ್ದು ಗಮನಾರ್ಹವಾದುದ್ದಾಗಿದೆ. ಜೊತೆಗೆ ಜಾಥಾ ಸಂಧರ್ಭದಲ್ಲಿ ಅನುಸರಿಸಬೇಕಾಗಿದ್ದ ನಿಯಮಗಳನ್ನು ರೂಪಿಸಿಕೊಂಡು, ಸ್ವಯಂ ಶಿಸ್ತನ್ನು ಹೇರಿಕೊಂಡು, ಶಾಂತಿಯುತವಾಗಿ ಹೋರಾಟವನ್ನು ನಡೆಸಿಕೊಂಡು ಹೋದದ್ದು, ರಾಷ್ಟ್ರದ ಚಳವಳಿ ಇತಿಹಾಸದಲ್ಲಿಯೇ ಒಂದು ವೈಶಿಷ್ಟ ಪೂರ್ಣವಾಗಿದ್ದಿತ್ತು.

ಹಾದಿಯುದ್ದ ಎಲ್ಲಾ ಗ್ರಾಮ ಪಟ್ಟಣಗಳವರು ಹಸಿರುವಾಣಿ ಚಪ್ಪರ ಹಾಕಿ, ಸ್ವಾಗತಿಸಿ ಶುಭ ಹಾರೈಸಿದರು. ಹೆಂಗಸರು ಆರತಿ ಬೆಳಗಿ ಬೀಳ್ಕೊಟ್ಟರು. ಕೆಂಗೇರಿ ನಾಗಣ್ಣನವರ ಛತ್ರದಲ್ಲಿ ರಾತ್ರಿ ತಂಗಿದಾಗ ಅವರು ಜಾಥಾಗೆ ಯಶಸ್ಸು ಕೋರಿದರು. ಜಾಥಾದಲ್ಲಿ ಭಾಗವಹಿಸಿದ್ದ ರೈತರ ರುಜುಗಳನ್ನು ಹಾಕಿಸಿದ ಹಾಳೆಗಳನ್ನು ಬೈಂಡ್ ಮಾಡಿಸಿ "ಇರ್ವಿನ್ ನಾಲಾ ರೈತರ ರುಜುಗಳ ಪುಸ್ತಕ" ಎಂದು ಅಚ್ಚು ಮಾಡಿಸಿದರು. ದಿವಾನರಿಗೆ ಸಲ್ಲಿಸಬೇಕಾದ ಅರ್ಜಿಯಲ್ಲಿ ಹದಿನಾಲ್ಕು ಬೇಡಿಕೆಗಳನ್ನು ಮಂಡಿಸಲಾಗಿತ್ತು.[18]

ಇರ್ವಿನ್ ನಾಲಾ ರೈತರ ಜಾಥಾ ಡಿಸೆಂಬರ್ 31, 1931 ರಂದು ಮದ್ದೂರಿನಿಂದ ಹೊರಟು ಜನವರಿ 4, 1932 ರಂದು ಮಧ್ಯಾಹ್ನ 2 ಗಂಟೆಗೆ ಬೆಂಗಳೂರು ಕಾರ ಕಛೇರಿ ತಲುಪಿತು. ಈ ಸಂದರ್ಭದಲ್ಲಿ ದಿವಾನರು ಕೆಲವು ರೈತ ಮುಖಂಡರನ್ನು ಒಳಕರೆದು ಮಾತನಾಡುವಂತೆ ತಿಳಿಸಿದರು. ಆದರೆ ಇದಕ್ಕೊಪ್ಪದ ಕೆ ಪುಟ್ಟಣ್ಣ ಹಾಗೂ ಹೊನ್ನಯ್ಯನವರು ನಮಗೆ ಮುಖಂಡರಾರು ಇಲ್ಲ. ಸಾವಿರಾರು ರೈತರು ಕಾಲ್ನಡಿಯಲ್ಲಿ ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಬಂದಿರುವುದರಿಂದ ನೀವೇ ರೈತರಿರುವಲ್ಲಿಗೆ ಬರಬೇಕು ಎಂದು ಒತ್ತಾಯಿಸಿದರು. ನಮಗೆ ಮುಖಂಡರಿಲ್ಲ ಎಂದು ಪ್ರತಿಪಾದಿಸಿದ ಚಳವಳಿ ನಾಯಕರು ಹೊಂದಿದ್ದಂತಹ ಭಾವನೆ, ಇಡೀ ರೈತ ಸಮುದಾಯದಲ್ಲಿ ಪ್ರತಿಯೋರ್ವ ರೈತನು ಸಮಾನ ಸ್ಥಾನ ಹೊಂದಿದ್ದನು ಎಂಬುದನ್ನು ತಿಳಿಸುತ್ತದೆ. ಇದನ್ನು ಗಮನಿಸಿದರೆ ಇಂದಿನ ಅನೇಕ ಚಳವಳಿಗಳ ನಾಯಕರು ನಾಯಕತ್ವದ ಗತ್ತುಗೈರತ್ತುಗಳನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಚಳವಳಿಗಳ ನಾಶಕ್ಕೆ ಕಾರಣವಾಗಿರುವ ನಿದರ್ಶನಗಳು ಉಂಟು !

ರೈತ ನಾಯಕರ ಮಾತಿಗೆ ಒಪ್ಪಿದ ದಿವಾನರು ಕಛೇರಿಯ ದಕ್ಷಿಣ ಭಾಗದ ಹುಲ್ಲಿನ ಮೈದಾನದ ವೇದಿಕೆಯಲ್ಲಿ ದಿವಾನರು, ಕೌನ್ಸಿಲರು, ಸರ್ಕಾರಿ ಕಾರ್ಯದರ್ಶಿಗಳು ಇಲಾಖಾ ಮುಖ್ಯಾಧಿಕಾರಿಗಳು ಮುಂತಾದವರು ಆಸೀನರಾದರು. ಹೀಗೆ ಇಡೀ ರೈತ ಸಮುದಾಯವು ಪ್ರಭುತ್ವವನ್ನು ಮಣಿಸಿದರ ಹೋರಾಟದ ವಿಜಯವೇ ಸರಿ! ಹೀಗಾಗಿ ವ್ಯಕ್ತಿಗತ ನಾಯಕತ್ವಕ್ಕಿಂತ

ಸಾಮೂಹಿಕ ನಾಯಕತ್ವ ಹೇಗೆ ಪರಿಣಾಮಕಾರಿ ಎಂಬುದು ಈ ಚಳವಳಿಯಲ್ಲಿ ಗೋಚರವಾಯಿತು.

ನಂತರ ಪ್ರಾರಂಭವಾದ ಸಭೆಯಲ್ಲಿ ದಿವಾನರು ರೈತರನ್ನು ಕುರಿತು ಸರ್ಕಾರದ ಆಜ್ಞೆಯನ್ನು ಸರಿಯಾಗಿ ಅರ್ಥಮಾಡಿಕೊಂಡರೆ ರೈತರಿಗೆ ಕಷ್ಟ ಒದಗದು ಎಂದಾಗ, ಅದಕ್ಕೆ ಸಮ್ಮತಿ ಸೂಚಿಸಿದ ಚನ್ನೇಗೌಡರನ್ನು ವೀರಣ್ಣಗೌಡರು ಸುಮ್ಮನಿರಿಸಿ ಅರ್ಜಿಯಲ್ಲಿನ ಹದಿನಾಲ್ಕು ಬೇಡಿಕೆಗಳ ಬಗ್ಗೆ ವಿವರಿಸಿ, ಪರಿಶೀಲಿಸಲು ಪ್ರಾರ್ಥಿಸಿ ರೈತರ ರುಜುಗಳ ಪುಸ್ತಕವನ್ನು ದಿವಾನರಿಗೆ ಸಲ್ಲಿಸಿದರು. ದಿವಾನರೊಡನೆ ನಡೆದ ಚರ್ಚೆಯಲ್ಲಿ ಒಂದೇ ಬಾರಿಗೆ ವಂತಿಕೆ ಹಣ ಕೊಡ ಬೇಕೆಂಬುದು ತಪ್ಪಿದರೆ, ಶೇ. 6.25 ಬಡ್ಡಿ ಕೊಡಬೇಕೆಂಬ ಸರ್ಕಾರದ ಆಜ್ಞೆ ಸಾಧುವಲ್ಲ, "ಕೈ ಮೇಲೆ ಕೊಡದ ಹಣಕ್ಕೆ ಹೀಗೆ ಬಡ್ಡಿ ಕೇಳುವುದು" ಅನ್ಯಾಯ ವೆನಿಸುತ್ತದೆ. ರೈತರಿಗೆಂದು ಕೋಟ್ಯಾಂತರ ರೂಪಾಯಿ ಖರ್ಚು ಮಾಡಿ, ಅಣೆಕಟ್ಟು ಕಟ್ಟಿ, ಕಾಲುವೆ ನಿರ್ಮಿಸಿ, ಉಪಕಾರ ಮಾಡಿರುವುದು ಸ್ವಾಗತಾರ್ಹ, ಆದರೆ ಈ ಕಾರ್ಯದಿಂದ ರೈತರಿಗೆ ಈವರೆಗೆ ಯಾವ ಉತ್ಪತ್ತಿಯೂ ಒದಗಲಿಲ್ಲ, ಉತ್ಪತ್ತಿ ಬರುವವರೆಗೆ ಸರ್ಕಾರ ಸಹನೆಯಿಂದ ಕಾಯಬೇಕು. ಬಡ್ಡಿ ವಜಾ ಆಗಬೇಕು ಎಂದೆಲ್ಲ ವೀರಣ್ಣಗೌಡರು ಪ್ರತಿವಾದ ಮಂಡಿಸಿದರು. ಸಹಾನುಭೂತಿಯಿಂದ ಆ ವಿಷಯಗಳನ್ನು ಪರಿಶೀಲಿಸುವ ಬಗ್ಗೆ ದಿವಾನರು ಆಜ್ಞೆ ಹೊರಡಿಸುವ ಬಗ್ಗೆ ಭರವಸೆ ನೀಡಿದರು.

ರೈತರು ಕೇಳಿ ಪ್ರಾರ್ಥಿಸಿರುವಂತೆ ಬಡ್ಡಿ ವಜಾ ಮಾಡಲಾಗುವುದು. ವಂತಿಕೆ ಹಣವನ್ನು ಹತ್ತು ಕಂತುಗಳಲ್ಲಿ ತೀರಿಸಲು ಅವಕಾಶ ನೀಡಲಾಗುವುದು. 10 ವರ್ಷಗಳು ಕಳೆದ ಮೇಲೆ ಉಳಿದ ಹಣದ ಮೇಲೆ ಬಡ್ಡಿ ಹಾಕಲಾಗುವುದು ಎಂದು ದಿವಾನರು ತಿಳಿಸಿದರು.[19] ಈ ವೇಳೆಗಾಗಲೇ ದಿವಾನರಿಗೆ ಪುಟ್ಟಣ್ಣನವರು ಸರ್ಕಾರಿ ನೌಕರರೆಂದು ತಿಳಿದು ಅದನ್ನು ಕೇಳಿದಾಗ ತಕ್ಷಣ ಪುಟ್ಟಣ್ಣನವರು ತಮ್ಮ ಶಿಕ್ಷಕ ವೃತ್ತಿಗೆ ರಾಜೀನಾಮೆ ನೀಡಿದರು. ಇದು ಪುಟ್ಟಣ್ಣನವರಿಗೆ ರೈತರ ಬಗ್ಗೆ ಇದ್ದ ಕಾಳಜಿಯನ್ನು ತೋರಿಸುತ್ತದೆ. ದಿವಾನರು ನೀಡಿದ ಭರವಸೆಗಳು ರೈತರಿಗೆ

ಸಂತೋಷವಾಗಿ ಶಾಂತಿಯಿಂದ ಹಿಂತಿರುಗಿದ್ದರು. ಈ ಜಾಥಾದಿಂದಾಗಿ ರೈತರಿಗೆ ಸುಮಾರು ಒಂದು ಕೋಟಿಯಷ್ಟು ರಿಯಾಯಿತಿ ದೊರೆತಂತಾಯಿತ್ತು. ವೀರಣ್ಣ ಗೌಡರು ಬೇಸಾಯಗಾರರ ಈ ಚಳವಳಿ ಸಮಯದಲ್ಲಿ ಇರ್ವಿನ್ ನಾಲಾ ರೈತರ ಕಷ್ಟನಷ್ಟಗಳು ಎಂಬ ಪುಸ್ತಕವನ್ನು ಬರೆದು ರೈತ ಸಂಘದಿಂದ ಪ್ರಕಟಿಸಲಾಯಿತು. ಆದರೆ ಈ ಪುಸ್ತಕವನ್ನು ವಶಪಡಿಸಿಕೊಳ್ಳವ ಸರ್ಕಾರದ ಕ್ರಮ ಸಫಲವಾಗಲಿಲ್ಲ.[20]

ಇರ್ವಿನ್ ನಾಲಾ ಬಯಲು ರೈತರು ತಮ್ಮ ತಮ್ಮಲ್ಲಿಯೇ ಹಲವು ಸಭೆಗಳನ್ನು ನಡೆಸಿ ನಾಲಾ ಬಯಲ ರೈತರ ಸಂಕಷ್ಟವನ್ನು ದಿವಾನರಿಗೆ ತಿಳಿಸಲು ಯೋಚಿಸಿದರು. ದಿವಾನರು ರೈತರ ಕುಂದುಕೊರತೆಗಳನ್ನು ಪ್ರತ್ಯೆಕ್ಷ ಕಾಣಲು ಮಂಡ್ಯಕ್ಕೆ ಬರುವ ಯೋಜನೆ ಇತ್ತು. ಆದರೆ ಆ ವಿಷಯವನ್ನು ಬಹಳ ಗೌಪ್ಯವಾಗಿಡಲಾಗಿತ್ತು. ಸರ್ಕಾರದ ಮುಲಾಜಿಗೆ ಮಣಿಯುವ ಸುಮಾರು 50-100 ಮಂದಿ ರೈತರನ್ನು ಮಾತ್ರ ಪ್ರವಾಸಿ ಬಂಗಲೆಯಲ್ಲಿ ಸೇರಿಸಲು ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿತ್ತು. ಈ ಸಂಬಂಧ ಜಿಲ್ಲಾ ಮ್ಯಾಜಿಸ್ಟ್ರೇಟರು ಏಪ್ರಿಲ್ 1932ರ ಆದೇಶದಂತೆ ಮಂಡ್ಯ ನಗರದ ಸುತ್ತ ಮುತ್ತ ಯಾವುದೇ ಸಭೆ ಸಮಾರಂಭಗಳು ನಾಲಾ ಬಯಲ ರೈತರ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಕರಪತ್ರಗಳ ಹಂಚಿಕೆಯನ್ನು ನಿಷೇಧಿಸಿದರು.[21]

ದಿವಾನರು ಮಂಡ್ಯಕ್ಕೆ ಬರುವುದಾಗಿ ತಿಳಿಸಿದ್ದರೂ ಅವರ ಉದ್ದೇಶ ಬೇರೆಯದೇ ಆಗಿತ್ತು. ತಮಗೆ ಅನುಕೂಲಕರವಾಗಿದ್ದ ರೈತರ ಸಭೆ ನಡೆಸಿ ಸರ್ಕಾರದ ಆಜ್ಞೆಗೆ ಬೆಂಬಲ ಪಡೆಯುವ ಹುನ್ನಾರ ಅದರಲ್ಲಡಗಿತ್ತು. ರಹಸ್ಯವಾಗಿ ಸಭೆ ಕರೆದಿರುವುದು ಹೇಗೋ ದಿವಾನರು ಬರುವ ಹಿಂದಿನ ದಿನ ರೈತನಾಯಕರಿಗೆ ತಿಳಿದು ಪ್ರತಿ ಹಳ್ಳಿಗೂ ಸುದ್ದಿ ತಿಳಿಯಿತು ದಿವಾನರು ಬರುವ ದಿನದ ಬೆಳಗ್ಗೆ 10 ಗಂಟೆಗೆ ನಿಷೇದಾಜ್ಞೆ ಉಲ್ಲಂಘಿಸಿ ಸುಮಾರು 10,000 ರೈತರನ್ನು ಜಮಾವಣೆಗೊಳಿಸಿ, ಅವರಿಗೆ ಕರಪತ್ರಗಳನ್ನು ಹಂಚಲಾಯಿತ್ತು. ಜಾರಿಗೊಳಿಸಿದ್ದ ನಿಷೇದಾಜ್ಞೆಗೆ ಬೆಲೆ ಬರಲಿಲ್ಲ.

ಈ ನಡುವೆ ಕೃಷ್ಣರಾಜ ಸಾಗರದ ಮುಖ್ಯದ್ವಾರದ ಮಂಟಪದಲ್ಲಿರುವ ಟಿಪ್ಪು ಸುಲ್ತಾನನ ಶಾಸನದ ಕನ್ನಡ ಭಾಷಾಂತರದ 10 ಸಾವಿರ ಅಚ್ಚಾದ ಪ್ರತಿಗಳನ್ನು ಅಲ್ಲಿ ಸೇರಿದ್ದ ರೈತರೆಲ್ಲರಿಗೂ ಮುಖಂಡರು ಹಂಚಿದರು. ಆ ಶಾಸನಾದ ಪ್ರಕಾರ-ಟಿಪ್ಪು ಕಟ್ಟಿಸುತ್ತಿದ್ದ ಅಣೆಕಟ್ಟಿನ (ಸುಮಾರು 70 ಅಡಿ) ನೀರಿನಿಂದ ಬೇಸಾಯ ಮಾಡುವ ರೈತರು ಬೇರೆಡೆ ತರಿ ವ್ಯವಸಾಯ ರೈತರು ಕೊಡುವ ಕಂದಾಯದಲ್ಲಿ ರೂಪಾಯಿಯ ಮುಕ್ಕಾಲು ಭಾಗವನ್ನು ಕೊಟ್ಟರೆ ಸಾಕು ಉಳಿದ ಕಾಲು ಭಾಗವನ್ನು ದೇವರ ಹೆಸರಲ್ಲಿ ಧರ್ಮವಾಗಿ ಬಿಡಲಾಗಿದೆ. ಇದಕ್ಕೆ ವಿರೋಧವಾಗಿ ನಡೆದು ಕೊಳ್ಳುವವರು "ಸೈತಾನರು" ಎಂಬ ವಾಕ್ಯಗಳು ಇದ್ದವು ಅಂದರೆ ಈ ಸರ್ಕಾರ ವಂತಿಗೆ ಹಣವನ್ನು ರೈತರು ನೀಡಬೇಕು ಎಂದರೆ, ಟಿಪ್ಪು ವಂತಿಗೆ ಹಣದ ಮಾತನ್ನೇ ಎತ್ತಿರಲಿಲ್ಲ ಇದು ರೈತರು ಪ್ರತಿಭಟಿಸಲು ಸ್ಫೂರ್ತಿನೀಡಿತು. ದಿವಾನರು ರೈತರು ಆಕ್ರೋಶ ನೋಡಿ ಸಭೆಯನ್ನೇ ನಡೆಸದೆ ತೆರಳಿದರು.[22] ನಿಷೇದಾಜ್ಞೆ ಉಲ್ಲಂಘಿಸಿದರೆಂದು ಹೆಚ್.ಕೆ. ವೀರಣ್ಣಗೌಡರೂ ಸೇರಿದಂತೆ 10-11 ಮಂದಿ ರೈತರ ಮೇಲೆ ಕ್ರಿಮಿನಲ್ ಕೇಸು ದಾಖಲು ಮಾಡಿ ಸನ್ನಡತೆಗೆಂದು ಜಾಮೀನು ಕೊಡಲು ಮೊಕದ್ದಮೆಯನ್ನು ಸರ್ಕಾರ ಹೂಡಿದುದ್ದು ರೈತರಿಗೆ ಅಸಮಧಾನವನ್ನುಂಟು ಮಾಡಿತು.

## 5.7 ಚಳವಳಿಯ ಮುಂದುವರಿದ ಭಾಗ

ಕೃಷ್ಣರಾಜ ಸಾಗರದಿಂದ ನಾಲೆಗಳಲ್ಲಿ ಯಥೇಚ್ಛ ನೀರು ಹರಿದರೂ ರೈತರು ಸಾಗುವಳಿಗೆ ಬಳಸಲು ಒಪ್ಪಲಿಲ್ಲ. ಸರ್ಕಾರ ಒತ್ತಾಯಿಸಿತು. ರೈತರು ರೈತ ಸಂಘದ ಸಲಹೆ ಬಯಸಿದರು. ಸಾಗುವಳಿಗೆ ರೈತರು ನೀರನ್ನು ಅಣೆಕಟ್ಟೆಯಿಂದ ಒದಗಿಸಲು ಕೇಳಿರಲಿಲ್ಲ, ಇಂತಿಷ್ಟೇ ವಂತಿಕೆ ಹಣ ಕೊಡಲು ರೈತರಿಂದ ಒಪ್ಪಿಗೆ ಪತ್ರ ಪಡೆದಿರಲಿಲ್ಲ ಸರ್ಕಾರ ಸೂಚಿಸಿದ ವ್ಯವಸಾಯ ಪದ್ಧತಿಯನ್ನು ರೈತರು ಒಪ್ಪಿರಲಿಲ್ಲ. ಹೀಗಿದ್ದರೂ ಇವೆಲ್ಲವನ್ನು ಏಕಪಕ್ಷೀವಾಗಿ ಸರ್ಕಾರ ಹೇರಿದ್ದು ರೈತರಿಗೆ ಹಿಡಿಸಿರಲಿಲ್ಲ. ಕೇಳಿರುವ ರಿಯಾಯಿತಿಯನ್ನು ಸರ್ಕಾರ ನೀಡುವವರಿಗೆ ನಾಲಾ ನೀರಿನ ಬಳಕೆಗೆ ರೈತರು ಸಿದ್ದರಿರಲಿಲ್ಲ. ಹೀಗಾಗಿ ರೈತ ಸಂಘದ ನಿರ್ಣಯವಾಗಿ, ನಾಲೆಯ ನೀರನ್ನು ಅನೇಕ ತಿಂಗಳುಗಳ ಕಾಲ ಕೇಳುವವರೇ ಇರಲಿಲ್ಲ.

## 5.8 ಚಳವಳಿಯನ್ನು ಒಡೆಯಲು ಸರ್ಕಾರ ನಡೆಸಿದ ಹುನ್ನಾರಗಳು

ರೈತರನ್ನು ಒಪ್ಪಿಸುವುದಕ್ಕಾಗಿ ಸರ್ಕಾರವು ನಾನಾ ಮಾರ್ಗಗಳನ್ನು ಅನುಸರಿಸಿತು. ಅದರಲ್ಲಿ ಚಳವಳಿ ನಾಯಕರಾಗಿದ್ದ ವೀರಣ್ಣಗೌಡರನ್ನು ತಮ್ಮ ಕೈವಶ ಮಾಡಿಕೊಳ್ಳುವುದು ಸೇರಿತ್ತು. ವೀರಣ್ಣಗೌಡರಿಗೆ ಪರಿಚಯದವರಾಗಿದ್ದ ಅಸಿಸ್ಟೆಂಟ್ ಇಂಜಿನಿಯರೊಬ್ಬರು ವೀರಣ್ಣಗೌಡರನ್ನು ಭೇಟಿ ಮಾಡಿ "ಇರ್ವಿನ್ ನಾಲಾ ರೈತರ ಚಳವಳಿಯಲ್ಲಿ ನಿಮ್ಮಿಂದ ಸಾಧ್ಯವಾಗುವಷ್ಟು ಸೇವೆ ಸಲ್ಲಿಸಿದ್ದೀರಿ. ಇದಕ್ಕಿಂತ ಹೆಚ್ಚೇನು ಮಾಡಲು ನಿಮ್ಮಿಂದ ಆಗುತ್ತದೆ? ಇನ್ನು ಮುಂದೆ ನೀವು ಈ ರೈತ ಚಳವಳಿಯಿಂದ ದೂರ ಇದ್ದರೆ ಅವಕ್ಕೆ ಪ್ರತಿಯಾಗಿ ಸರ್ಕಾರದಿಂದ ನಿಮಗೆ ಬೇಕಾದ ಸಹಾಯ ಮಾಡಿಸಿಕೊಡುತ್ತೇನೆ. ನಾಲಾ ಬಯಲಿನಲ್ಲಿ ನೀವು ಕೇಳುವಕಡೆ ಮೂರು ಎಕರೆ ನೀರಾವರಿ ಸಾಗುವಳಿಗೆ ಯೋಗ್ಯವಾದ ಜಮೀನು ಕೊಡಿಸುತ್ತೇನೆ" ಎಂದು ನೇರವಾಗಿ ಹೇಳಿದರು. ಸ್ನೇಹಿತರ ಈ ಮಾತುಗಳನ್ನು ಕೇಳಿ ಅಸಮಾಧಾನಗೊಂಡ ವೀರಣ್ಣಗೌಡರು ಅವರನ್ನು ಕುರಿತು ಕೇವಲ "ಜಮೀನು ಗಳಿಕೆಗೋಸ್ಕರ ಈ ಚಳವಳಿಯಲ್ಲಿ ಭಾಗವಹಿಸಲಿಲ್ಲ, ರೈತರು ನನ್ನ ಕುಲಬಾಂಧವರು ಅವರಿಗೆ ಎದುರಾಗಿರುವ ಕಷ್ಟಗಳನ್ನು ಪರಿಹರಿಸಬೇಕೆಂದು ಹೋರಾಡುತ್ತಿದ್ದೇನೆ. ರೈತರ ಹೆಸರಲಿನಲ್ಲಿ ನನ್ನ ಸ್ವಾರ್ಥ ಸಾಧಿಸಿಕೊಳ್ಳುವ ವ್ಯಕ್ತಿ ನಾನಲ್ಲ" ಎಂದು ಹೇಳಿದರು. [23]

ವೀರಣ್ಣಗೌಡರನ್ನು ತಮ್ಮ ಕೈವಶ ಮಾಡಿಕೊಳ್ಳುವುದು ಸಾಧ್ಯವಿಲ್ಲವೆಂದು ತಿಳಿದ ಮೇಲೆ ಸರ್ಕಾರವು ಬೇರೆ ರೀತಿಯ ನೇರ ಕ್ರಮವನ್ನು ಕೈಗೊಂಡಿತು. ವೀರಣ್ಣಗೌಡರು ತಮ್ಮ ನಿಲುವನ್ನು ಬದಲಿಸಲು ಸಾಧ್ಯವಿಲ್ಲವೆಂದು ತಿಳಿದ ಸರ್ಕಾರ ರೈತರ ಮೇಲೆ ತಮ್ಮ ಗದಾಪ್ರಹಾರ ಮಾಡಿತು. ಸರ್ಕಾರ ರೈತರ ಕೋರಿಕೆಗಳನ್ನು ಮಂಜೂರು ಮಾಡುವವರೆಗೆ ನಾಲಾ ನೀರನ್ನು ಬಳಸಬಾರದೆಂದು ರೈತ ಸಂಘದವರು ನಿರ್ಧರಿಸಿದ್ದ ನಿರ್ಣಯದಂತೆ ರೈತರು ನಡೆದುಕೊಂಡರು. ಆದರೆ ಸರ್ಕಾರ ರೈತರು ನಾಲಾ ನೀರನ್ನು ಬಳಸಿ ಕೊಳ್ಳುವಂತೆ ಮಾಡಲು ಕೆಲವು ವಿಷಯಗಳ

ಮೇಲೆ ಒತ್ತಡ ಹೇರಿತು. ಸರ್ಕಾರದಿಂದ ಮತ್ತು ಸಹಕಾರ ಸಂಘಗಳಿಂದ ಸಾಲ ಪಡೆದು ಅನೇಕ ವರ್ಷಗಳಾದರೂ ಸಾಲ ತೀರಿಸದ್ದಿದವರು, ರೈತರಿಂದ ವಸೂಲಾದ ಕಂದಾಯ ಕೌಳಿಗೆಗಳನ್ನು ಕಿಸ್ತುವಾರು ಸರ್ಕಾರಕ್ಕೆ ಕಟ್ಟದೆ ದಸ್ತು ಮಾಡಿರುವ ಪಟೇಲರು ಮತ್ತು ಶಾನುಭೋಗರು, ವ್ಯವಸಾಯಾಭಿವೃದ್ಧಿಗೆ ಸಾಲ ಕೊಡಬೇಕೆಂದು ಅರ್ಜಿ ಹಾಕಿರುವವರು- ಇಂಥ ರೈತ ಜನರನ್ನು ಸ್ಥಳೀಯ ಅಧಿಕಾರಿಗಳು ಕರೆಸಿಕೊಂಡು. ಅವರು ನಾಲೆ ನೀರು ಉಪಯೋಗಿಸಿಕೊಳ್ಳುವುದಾದರೆ ಅವರ ಮೇಲೆ ಯಾವ ಕ್ರಮವನ್ನು ಜರುಗಿಸುವುದಿಲ್ಲವೆಂದು, ಅದಕ್ಕೆ ಬದಲಾಗಿ ಸರ್ಕಾರವೇ ವ್ಯವಸಾಯ ಇಲಾಖೆ ಮೂಲಕ ಎಲ್ಲಾ ಸಹಾಯವನ್ನು ಒದಗಿಸಿಕೊಟ್ಟು ಅಂಥವರ ಜಮೀನುಗಳಲ್ಲಿ ಸಾಗುವಳಿ ಮಾಡಿಸಿ, ಅದರಿಂದ ಬರುವ ಆದಾಯದಲ್ಲಿ ಸರ್ಕಾರದ ಸಾಲವನ್ನು ಕಂತುಗಳಲ್ಲಿ ವಜಾ ಮಾಡಿಕೊಂಡು, ಉಳಿದುದನ್ನು ಆಯಾ ರೈತರಿಗೆ ಕೊಡುವುದು ಸರ್ಕಾರದ ಅಭಿಪ್ರಾಯವಾಗಿದೆ ಎಂದು ರೈತರಿಗೆ ಭರವಸೆ ನೀಡಿದರು.

ನಾಲೆ ನೀರು ಉಪಯೋಗಿಸಿಕೊಳ್ಳಲು ಒಪ್ಪಿದರೆ ತಾವುಗಳು ಜೈಲಿಗೆ ಹೋಗುವುದು ತಪ್ಪುತ್ತದೆ. ಇದರಿಂದ ಸರ್ಕಾರದ ಕಪಿಮುಷ್ಠಿಯಿಂದ ಪಾರಾಗಬಹುದು, ಜೊತೆಗೆ ಸರ್ಕಾರದ ನೆರವಿನಿಂದ ಸಾಗುವಳಿ ಮಾಡಿ ಹಣಗಳಿಸುವುದಕ್ಕೆ ಇದೊಂದು ಒಳ್ಳೆಯ ಅವಕಾಶವೆಂದು ರೈತರು ಭಾವಿಸುವುದರಲ್ಲಿ ಆಶ್ಚರ್ಯವಿಲ್ಲ. ಹಾಗೆ ನೋಡಿದರೆ ಸಾಗುವಳಿಗೆ ನೀರಿಲ್ಲದೆ ಒಣಪ್ರದೇಶದಲ್ಲಿ ಖುಷ್ಕಿ ಬೆಳೆಯಿಂದ ಜೀವನ ನಡೆಸುತ್ತಿದ್ದವರು ತಮ್ಮ ಜಮೀನು ಪಕ್ಕದಲ್ಲೇ ಕಾವೇರಿ ನೀರು ಹರಿದುಹೋಗುತ್ತಿದ್ದರೂ ಸುಮಾರು ಎರಡು ವರ್ಷಗಳ ಕಾಲ ನಾಲೆ ನೀರಿಗೆ ಆಸೆ ಪಡದಿದ್ದುದು ಆಶ್ಚರ್ಯಕರವಾಗಿ ಕಾಣುತ್ತದೆ.

ಎರಡನೆಯ ಕ್ರಮವಾಗಿ ಸರ್ಕಾರದ ಅಧಿಕಾರಿಗಳು ಅನೇಕ ರೈತ ಮುಖಂಡರ ಮೇಲೆ ಕೇಸುಗಳನ್ನು ಹಾಕಿಸಿದ್ದವರ ಮನೆಯವರನ್ನು ಅವರ ಬಂಧುಗಳನ್ನು ಭೇಟಿ ಮಾಡಿ, ಮೊಕದ್ದಮೆಗಳಿಗೆ ಒಳಪಟ್ಟಿರುವವರು ನೀರನ್ನು ಬಳಸಿಕೊಳ್ಳುತ್ತೇವೆ ಎಂದು ಮುಚ್ಚಳಿಕೆ ಬರೆದು ಕೊಡುವುದಾದರೆ ಅಂಥವರ ಮೇಲಿನ ಮೊಕದ್ದಮೆಗಳನ್ನು ಸರ್ಕಾರ ಹಿಂತೆಗೆದುಕೊಳ್ಳುತ್ತದೆ ಎಂಬ

ಆಶೋತ್ತರಗಳನ್ನು ನೀಡಿದರು. ಒಂದು ವೇಳೆ ಈ ರೀತಿ ರೈತ ಮುಖಂಡರು ಮಾಡದಿದ್ದರೆ ಜೈಲು ಶಿಕ್ಷೆಯಾಗುತ್ತದೆ ಎಂದು ಹೆದರಿಸಿದರು. ಆ ಕಾಲದಲ್ಲಿ ಜೈಲಿಗೆ ಹೋಗುವುದು ಅಪಮಾನಕರವಾದ ವಿಷಯವಾಗಿತ್ತು. ಸರ್ಕಾರದ ಕೃಪಾಕಟಾಕ್ಷಕ್ಕೆ ಪಾತ್ರರಾಗಿದ್ದ ಕೆಲವರು ವೀರಣ್ಣಗೌಡರ ಮಾತನ್ನು ಕೇಳಿ ಜೈಲಿಗೆ ಹೋಗಬೇಕಾದ ಪರಿಸ್ಥಿತಿ ಬಂತು ಎಂದು ನಾಟಕೀಯವಾಗಿ ಹೆಂಗಸರ ಮನ ಕರಗುವಂತೆ ಹೇಳಿ ರೈತ ಚಳವಳಿಯನ್ನು ನಿಲ್ಲಿಸಲು ಪ್ರಯತ್ನಿಸಿದರು. ಯಾವ ಕೆಟ್ಟ ಕೆಲಸವನ್ನು ಮಾಡದೆ ಜೈಲಿಗೆ ಹೋಗುವುದೆಂದರೆ ಅದನ್ನು ಯಾರು ಒಪ್ಪದ ಮಾತು. ಈ ರೀತಿ ಭಾವಿಸಿದ ಅನೇಕ ರೈತರು ನಾಲಾ ನೀರು ಉಪಯೋಗಿಸಿಕೊಂಡು ಸಾಗುವಳಿ ಮಾಡಲು ಒಪ್ಪಿ ಮುಚ್ಚಳಿಕೆಗಳನ್ನು ಬರೆದು ಕೊಟ್ಟರು. ಇಂಥ ರೈತರ ಜಮೀನುಗಳಲ್ಲಿ ಕೃಷಿ ಇಲಾಖೆಯವರು ಸರ್ಕಾರದಿಂದ ಆಧುನಿಕ ಕೃಷಿ ಉಪಕರಣಗಳನ್ನು, ಉತ್ತಮ ಬೀಜ, ಗೊಬ್ಬರಗಳನ್ನು ಒದಗಿಸಿಕೊಟ್ಟಿದ್ದರ ಜೊತೆಗೆ ಅವರೇ ಸ್ವತಃ ನಿಂತು ಬೇಸಾಯ ಮಾಡಿಸಿ ಕೊಟ್ಟರು. ಇಂಥವರ ಜಮೀನುಗಳಲ್ಲಿ ಕಡಲೇಕಾಯಿ, ಭತ್ತ, ಮುಂತಾದ ಬೆಳೆಗಳು ಹುಲುಸಾಗಿ ಬೆಳೆದುದರಿಂದ ಅವು ಜನರ ಕಣ್ಮನಗಳನ್ನು ಆಕರ್ಷಿಸುತ್ತಿದ್ದವು. ಆ ಬೆಳೆಗಳನ್ನು ಕಟಾವು ಮಾಡಿಸಿ ಸರ್ಕಾರಕ್ಕೆ ಬರಬೇಕಾಗಿದ್ದ ಸಾಲಕ್ಕಾಗಿ ಸ್ವಲ್ಪ ಭಾಗ ಮಾತ್ರ ಹಿಡಿದುಕೊಂಡು ಉಳಿದ ಹಣವನ್ನು ಆಯಾ ರೈತರಿಗೆ ಕೊಡುತ್ತಿದ್ದರು. ಇದು ಇತರ ರೈತರ ಬಾಯಲ್ಲಿ ನೀರೂರುವಂತೆ ಮಾಡಿತು. ಅನೇಕ ರೈತರು ವೀರಣ್ಣಗೌಡರ ಮಾತು ಕೇಳದಿದ್ದರೆ ನಮಗೂ ಈ ರೀತಿ ಹಣ ಸಂಪಾದನೆಯಾಗುತ್ತಿತ್ತು ಎಂದು ಬಹಿರಂಗವಾಗಿ ಗೊಣಗಾಡಿಕೊಳ್ಳುವುದಕ್ಕೆ ಪ್ರಾರಂಭಿಸಿದರು.[24]

ನಂತರ ಅನೇಕ ರೈತ ಮುಖಂಡರ ಮೇಲೆ ಹೂಡಿದ್ದ ಮೊಕದ್ದಮೆಗಳ ವಿಚಾರಣೆ ನಡೆಯುತ್ತಿತ್ತು. ಸನ್ನಡತೆಗಾಗಿ ಹಾಕಿದ್ದ ಮೊಕದ್ದಮೆ ಫಸ್ಟ್ ಕ್ಲಾಸ್ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲೂ ನಡೆಯುತ್ತಿದ್ದವು. ಈ ಮೊಕದ್ದಮೆ ವಿಚಾರಣೆ ಬಗ್ಗೆ ಮ್ಯಾಜಿಸ್ಟ್ರೇಟರು ವೀರಣ್ಣಗೌಡರಿಗೆ 55 ರೂ.ಗಳ ಜುಲ್ಮಾನೆ ವಿಧಿಸಿ ಜಿಲ್ಲಾ ಕೋರ್ಟಿನಲ್ಲಿ ಅಫೀಲು ಮಾಡಲು

ಅವಕಾಶವುಂಟು ಮಾಡಿಕೊಟ್ಟರು. ಆ ಮೊಕದ್ದಮೆಯನ್ನು ಮೈಸೂರು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಾಗಿದ್ದ ನಾರಾಯಣ ಸ್ವಾಮಿ ನಾಯ್ಡು ವಜಾ ಮಾಡಿದರು.

ಸನ್ನಡತೆ ಬಗ್ಗೆ ನಡೆಯುತ್ತಿದ್ದ ಮೊಖದ್ದಮೆ ಎಕ್ಸ್ ಆಫಿಷಿಯೋ ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟರ ಬಳಿ ಕೆಲವು ತಿಂಗಳು ನಡೆದ ಮೇಲೆ ಅದನ್ನು ಸರ್ಕಾರ ಹಿಂತೆಗೆದುಕೊಂಡಿತು. ಆದರೆ ಕಾಲಾಂತರದಲ್ಲಿ ಸಾಲಗಾರ ರೈತರು ಅಸಹಾಯಕರಾಗಿ ನಾಲಾ ನೀರು ಬಳಸಿ ಸಾಗುವಳಿ ಮಾಡಲು ನೆರವು ಪಡೆದಾಗ ಮೊದಲಿನ ಮಾನಸಿಕ ನಿರ್ಧಾರ ಸಡಿಲಗೊಂಡಿತು. ಕ್ರಮೇಣ ಇರ್ವಿನ್ ನಾಲಾ ರೈತ ಸಂಘದ ಚಟುವಟಿಕೆಗಳು ವಿವಿಧ ಕಾರಣಗಳಿಂದ ಮುಕ್ತಾಯಗೊಂಡವು.[25] ಅದರೆ ಈ ಚಳವಳಿ ರೈತ ಸಂಘಟನೆಯ ಶಕ್ತಿ, ಶಿಸ್ತು, ಧೈರ್ಯವನ್ನು ಎತ್ತಿತೋರಿಸಿತು. ಸಾಮಾನ್ಯ ರೈತರಲ್ಲೂ ಆತ್ಮವಿಶ್ವಾಸವನ್ನು ಹುಟ್ಟಿಸಿತು. ಈ ವಿಶ್ವಾಸವೆ ಮುಂದೆ ನಡೆದ ಸ್ವಾತಂತ್ರ್ಯ ಹೋರಾಟ ಸಂಬಂಧದ ಧ್ವಜ ಸತ್ಯಾಗ್ರಹ ಮುಂತಾದ ಚಟುವಟಿಕೆಗಳಿಗೆ ರೈತರ ಬೆಂಗಲ ದೊರಕಲನುವಾಯಿತು. ಹಾಗಾಗಿ ಈ ಚಳವಳಿ ಹೋರಾಟದ ಕೊಂಡಿಗಳನ್ನು ಸೃಷ್ಟಿಸಿತು.

**ಅಡಿ ಟಿಪ್ಪಣಿಗಳು**

1. ಎನ್.ಪಿ. ಶಂಕರ್‌ನಾರಾಯಣರಾವ್, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, 1991, ಬೆಂಗಳೂರು. ಪುಟಗಳು 239-240.
2. ಡಿ. ಲಿಂಗಯ್ಯ, (1975), ಶಿವಪುರ ಧ್ವಜ ಸತ್ಯಾಗ್ರಹ, ಬೆಂಗಳೂರು, ಪುಟ – 36.
3. ಡಾ.ಕೆ.ಜೆ. ಸುರೇಶ್, ಮಂಡ್ಯ ಜಿಲ್ಲಾ ರೈತ ಚಳವಳಿ, ಒಂದು ಅಧ್ಯಯನ : ಅಪ್ರಕಟಿತ ಪ್ರೌಢ ಪ್ರಬಂಧ, 1999, ಮೈಸೂರು ವಿಶ್ವವಿದ್ಯಾನಿಲಯ, ಪುಟ 154.
4. Draft Report - n-3.
5. Proceedings of the Government, Feb - 1932.

6. Proceedings of the Government of his Highness the Maharaja of Mysore, Krishnaraja Sagar works, 8th June, 1931.

7. ಡಾ. ಎಂ.ಜಿ.ನಾಗರಾಜ್ ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು (ಸಂ-1), 2006, ಬೆಂಗಳೂರು ಪುಟ -72.

8. P.M.R.A. (Dasara Session) for 1931, P-13.

9. P.M.R.A (Dasara Session) for 1931, PP 290-291.

10. Annexure to the Report, n-10, P-11.

11. ಡಾ. ಎಂ.ಜಿ.ನಾಗರಾಜ್, ಮೇಲೆ ಉದ್ಧರಿಸಿದ ಗ್ರಂಥ ಪುಟ-73.

12. ಹ.ಕ. ರಾಜೇಗೌಡ (ಸಂ) ಸಿಂಗಾರ (ಕೆ. ಸಿಂಗಾರಿಗೌಡ ಅಭಿನಂದನಾ ಗ್ರಂಥ), 1988, ಮಂಡ್ಯ, ಪುಟ-370.

13. ಹ.ಕ. ರಾಜೇಗೌಡ (ಸಂ) ಸಿಂಗಾರ (ಕೆ. ಸಿಂಗಾರಿಗೌಡ ಅಭಿನಂದನಾ ಗ್ರಂಥ), 1988, ಮಂಡ್ಯ, ಪುಟ-368.

14. ಡಾ. ಎಂ.ಜಿ.ನಾಗರಾಜ್, ಮೇಲೆ ಉದ್ಧರಿಸಿದ ಗ್ರಂಥ ಪುಟ-73.

15. ಪ್ರೊ. ಡಿ. ಲಿಂಗಯ್ಯ, ಎಚ್. ಕೆ. ವೀರಾಣ್ಣಗೌಡ (ಸಂಕ್ಷಿಪ್ತ ಜೀವನ ಚರಿತ್ರೆ) 1999, ಬೆಂಗಳೂರು, ಪುಟ-31-32;

16. ಹ.ಕ. ರಾಜೇಗೌಡ, ಮೇಲೆ ಉದ್ಧರಿಸಿದ ಗ್ರಂಥ ಪುಟಗಳು - 372-373.

17. ಡಾ. ಎಂ.ಜಿ.ನಾಗರಾಜ್ ಮೇಲೆ ಉದ್ಧರಿಸಿದ ಗ್ರಂಥ ಪುಟ-74.

18. ಡಾ. ಎಂ.ಜಿ.ನಾಗರಾಜ್ ಮೇಲೆ ಉದ್ಧರಿಸಿದ ಗ್ರಂಥ ಪುಟ-75.

19. ಡಾ. ಎಂ.ಜಿ.ನಾಗರಾಜ್ ಮೇಲೆ ಉದ್ಧರಿಸಿದ ಗ್ರಂಥ ಪುಟ-76-77.

20. ಹ.ಕ. ರಾಜೇಗೌಡ ಮೇಲೆ ಉದ್ಧರಿಸಿದ ಗ್ರಂಥ ಪುಟಗಳು 378-379.

21. ವಿಶ್ವ ಕರ್ನಾಟಕ (ಕನ್ನಡ ದಿನ ಪತ್ರಿಕೆ), ಬೆಂಗಳೂರು, 12-06-1932 ಪುಟ- 13.

22. ಎಚ್.ಎಲ್.ಕೇಶವ ಮೂರ್ತಿ, ಇರ್ವಿನ್ ನಾಲಾ ಹೋರಾಟ ವಜ್ರಮ ಹೋತ್ಸವ, ಶೂದ್ರಶಕ್ತಿ ಸಂಚಿಕೆ , ಫೆಬ್ರವರಿ 1-15, 2007, ಪುಟಗಳು 15-16.

23. ಹ.ಕ. ರಾಜೇಗೌಡ ಮೇಲೆ ಉದ್ಧರಿಸಿದ ಗ್ರಂಥ ಪುಟಗಳು, 381-382.

24. ಹ.ಕ. ರಾಜೇಗೌಡ ಮೇಲೆ ಉದ್ಧರಿಸಿದ ಗ್ರಂಥ ಪುಟಗಳು, 382-383.

25. ಎಚ್.ಕೆ.ವೀರಣ್ಣಗೌಡ ಬದುಕು ಮೆಲುಕು, 1974, ಮೈಸೂರು ಪುಟಗಳು 145-151.

# ಅಧ್ಯಾಯ-6

# ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ನಡೆದ ಚರ್ಚೆಗಳು

6.1 ಇರ್ವಿನ್ ನಾಲಾ ರೈತರ ಮಹಾಸಭೆ, ಮಂಡ್ಯ - 1932

# ಅಧ್ಯಾಯ-6

## ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ನಡೆದ ಚರ್ಚೆಗಳು

ಇರ್ವಿನ್ ನಾಲಾ ಪ್ರದೇಶದ ರೈತರ ಮುಖ್ಯ ಚಳವಳಿ ಡಿಸೆಂಬರ್ 1931 ರಿಂದ ಜನವರಿ 1932 ರವರೆಗೆ ನಡೆಯಿತಾದರೂ ಈ ಹೋರಾಟದ ಪ್ರತಿಧ್ವನಿ 1934 ರ ವರೆಗೂ ಶಾಸಕರ ಮೂಲಕ ಕೇಳಿಸುತ್ತಿದ್ದದಕ್ಕೆ ಅದು ಬೀರಿನ ಪ್ರಭಾವ ಕಾರಣವಾಗಿತ್ತು ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ಚಳವಳಿ ಸಂಬಂಧದ ಕಾರ್ಯಕಲಾಪಗಳನ್ನು ಪ್ರತ್ಯೇಕವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

1931 ರ ಜೂನ್ ಆರಂಭದ ಅಧಿವೇಶನದಲ್ಲಿ ಎಂ.ಸಿ. ಲಿಂಗೇಗೌಡರು ಇರ್ವಿನ್ ನಾಲಾ ಸಂಬಂಧದ ಸಮಸ್ಯೆಗಳ ಬಗ್ಗೆ ಸರ್ಕಾರದ ಗಮನ ಸೆಳೆಯುತ್ತಾ ತಮ್ಮ ಅಭಿಪ್ರಾಯವನ್ನು ಈ ರೀತಿ ಮಂಡಿಸಿದರು "ಸರ್ಕಾರ ಇರ್ವಿನ್ ನಾಲಾ ಪ್ರದೇಶದ ಜಮೀನು ಸಾಗುವಳಿದಾರರ ಮೇಲೆ ವಂತಿಕೆ (ಕಾಂಟ್ರಿಬ್ಯೂಷನ್) ಹಣವನ್ನು ಎಕರೆಗೆ 60 ರೂನಿಂದ 120 ರೂಗೆ ನಿಗಧಿಗೊಳಿಸಿರುವುದು ಬಡ ರೈತರನ್ನು ಸಂಕಷ್ಟಕ್ಕೆ ಸಿಲುಕಿಸಿದಂತಾಗಿದೆ ಜೊತೆಗೆ ಬ್ಲಾಕ್ ಸಿಸ್ಟಂ ಬೆಳೆ ಪದ್ಧತಿ ಬೇರೆ ಪ್ರದೇಶಗಳಲ್ಲಿ ವಿಫಲವಾಗಿರುವುದರಿಂದ ಇರ್ವಿನ್ ನಾಲಾ ಪ್ರದೇಶದಲ್ಲಿ

ಅನುಸರಿಸುವುದು ಸರಿಕಾಣಿಸುವುದಿಲ್ಲ" ಎಂದು ಅಭಿಪ್ರಾಯಪಟ್ಟರು. ಈ ಬಗ್ಗೆ ಪರಿಶೀಲನೆ ನಡೆಸಲು ಇರ್ವಿನ್‌ನಾಲಾ ಸಮಿತಿಯಲ್ಲಿ ಈ ನಾಲಾ ಪ್ರದೇಶದ ಕೆಲವು ರೈತರನ್ನು ಸೇರಿಸಿಕೊಳ್ಳಬೇಕೆಂದು ಒತ್ತಾಯಿಸಿದರು. ಈ ಪ್ರದೇಶದಲ್ಲಿ ಸಹಕಾರಿ ಸಂಘಗಳನ್ನು, ಭೂ ಅಡಮಾನ ಬ್ಯಾಂಕ್ ಹಾಗೂ ಬೀಜ ಮಳಿಗೆಗಳನ್ನು ಸ್ಥಾಪಿಸುವಂತೆ ಹೇಳಿ ರೈತರ ಪರವಾಗಿ ತಮ್ಮ ನಿಲುವುಗಳನ್ನು ವ್ಯಕ್ತಪಡಿಸಿದರು.[1]

1931ರ ದಸರಾ ಅಧಿವೇಶನದಲ್ಲಿ ಇರ್ವಿನ್ ನಾಲಾ ಪ್ರದೇಶದ ಮಣ್ಣು ಪರೀಕ್ಷೆಯನ್ನು ಕೃಷಿ ರಸಾಯನಿಕ ತಜ್ಞರಿಂದ ನಡೆಸಲಾಯಿತು. ಅದು ಇಲ್ಲಿನ ಕೃಷಿ ಪ್ರಗತಿಗೆ ಪೂರಕವಾದ ಕಾರ್ಯಕ್ರಮವಾಗಿತ್ತು. 1927 ರಲ್ಲಿಯೇ ಇರ್ವಿನ್ ನಾಲೆ ಯೋಜನೆಗೆ 222 ಲಕ್ಷ ಅಂದಾಜು ವೆಚ್ಚವನನ್ನು ಮಂಜೂರು ಮಾಡಲಾಗಿದ್ದು ಮದ್ದೂರು ಇರ್ವಿನ್‌ನಾಲಾ ಶಾಖೆಯು ಇಪ್ಪತ್ತೆರಡು ಸಾವಿರ ಎಕರೆಗಳ ಸಾಗುವಳಿಗೆ ಸಿದ್ಧಗೊಂಡಿತು. ಮಣ್ಣು ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಇರ್ವಿನ್ ನಾಲಾ ಪ್ರದೇಶದಲ್ಲಿ ಕಬ್ಬು ಹಾಗೂ ಧಾನ್ಯ ಬೀಜ ಬೆಳೆಯ ಪ್ರದೇಶದ ಪ್ರಗತಿಯ ವ್ಯವಸ್ಥೆ ಮಾಡಲಾಯಿತು. ಸುಮಾರು ಹತ್ತು ಎಕರೆ ಪ್ರದೇಶದಲ್ಲಿ ಕಬ್ಬು ನೆಟ್ಟು ಜುಲೈ ತಿಂಗಳ ವೇಳೆಗೆ ಈ ವಿಶೇಷ ನಾಲೆಯ ಮೂಲಕ ನೀರುಣಿಸಲಾಯಿತು.[2]

1931 ಅಕ್ಟೋಬರ್‌ನಲ್ಲಿ ಹೆಚ್.ಸಿ. ದಾಸಪ್ಪನವರು ಇರ್ವಿನ್ ನಾಲಾ ಪ್ರದೇಶದಲ್ಲಿ ನೀರು ಸರಬರಾಜಿಗಿರುವ ಷರತ್ತುಗಳು ನಿಯಮಗಳು ಹಾಗೂ ಸಾಗುವಳಿ ಪದ್ದತಿ ಅನ್ವಯ ಕುರಿತಂತೆ ನಿಲುವಳಿಯನ್ನು ಮಂಡಿಸಿದರು ಇರ್ವಿನ್ ನಾಲಾ ಪ್ರದೇಶದಲ್ಲಿ ಸರ್ಕಾರ ಅನ್ವಯಗೊಳಿಸಬೇಕೆಂದಿರುವ ಹೊಸ ಪದ್ಧತಿಯಾದ "ಬ್ಲಾಕ್‌ಸಿಸ್ಟಂ"ನ ಇತಿಮಿತಿಗಳ ಬಗ್ಗೆ ದಾಸಪ್ಪನವರು ಒಂದು ವರ್ಷ ಭತ್ತ, 2ನೇ ವರ್ಷ ಒಣಬೆಳೆಗಳು, 3ನೇ ವರ್ಷ ಕಬ್ಬು ಬೆಳೆಯ ಬೇಕೆಂಬುದಾಗಿದೆ. ಇದರಂತೆ ರೈತ ಕೃಷಿ ಮಾಡಿದರೆ ಆತ ಆರ್ಥಿಕ ಸಂಕಷ್ಟಕ್ಕೊಳಗಾಗುತ್ತಾನೆಯೇ ಹೊರತು ಪ್ರಗತಿಯಂತೂ ಅಲ್ಲ. ಅಲ್ಲಿ ಖುಷ್ಕಿ ಬೆಳೆಯುವುದಿಲ್ಲ ಇದು ರೈತರಿಗೆ ಹೊರೆಯಾಗುತ್ತದೆ ಎಂದರು.

ಇನ್ನೂ ವಂತಿಕೆ (ಕಾಂಟ್ರಿಬ್ಯೂಷನ್) ಹಣದ ಬಗ್ಗೆ ಪ್ರಸ್ತಾಪಿಸಿದ ದಾಸಪ್ಪನವರು ರೈತರೊಡನೆ ಸಮಾಲೋಚನೆ ನಡೆಸದೇ 100 ರೂ ನಿಂದ 120 ರೂಗಳಿಗೆ ವಂತಿಕೆ (ಕಾಂಟ್ರಿಬೂಷನ್) ಹಣವನ್ನು ಏರಿಸಿದ್ದು ತಪ್ಪು. ರೈತರು ಈ ಹಣವನ್ನು ನೀರು ಒದಗಿಸಿದ ಮೊದಲ ವರ್ಷದೊಳಗೆ ಸಲ್ಲಿಸಿದರೆ 5% ರಷ್ಟು ಸೋಡಿ ಬಿಡುವ ಬಗ್ಗೆ ಹೇಳಿದ್ದು ಇಲ್ಲವಾದರೆ ಹತ್ತು ಕಂತುಗಳಲ್ಲಿ ನೀಡಿ ಉಳಿಕೆ ಹಣವನ್ನು 6 $^{1}/_{4}$ % ರಂತೆ ಬಡ್ಡಿ ತರಬೇಕೆಂದು ಸರ್ಕಾರ ಹೇಳಿದೆ. ಇದು ಸರಿಯಲ್ಲ ಎಂದು ದಾಸಪ್ಪನವರು ಇಷ್ಟೆಲ್ಲಾ ತೊಡಕುಗಳಿದ್ದರೂ ಇವುಗಳ ಅರಿವಿಲ್ಲದ ಮುಗ್ಧ ರೈತರು ಮುಚ್ಚಳಿಕೆಗಳನ್ನು ಬರೆದು ಕೊಟ್ಟು ಬಿಟ್ಟಿದ್ದಾರೆ ಎಂದು ಇವು ಅಸಾಧ್ಯದ ಷರತ್ತುಗಳಾದ ಕಾರಣ ಸರ್ಕಾರ ರೈತರನ್ನು ಒತ್ತಾಯಿಸಬಾರದೆಂದು ಆಗ್ರಹಿಸಿದರು.[3]

ಎಸ್.ಸಿ. ಮಲ್ಲಯ್ಯನವರು ಬ್ಲಾಕ್‌ಸಿಸ್ಟಂ ಬೆಳೆ ಪದ್ದತಿ ಕುರಿತಂತೆ ಅದರ ಅನುಷ್ಠಾನದಿಂದ ರೈತರಿಗೆ ಅನಗತ್ಯ ನಷ್ಟ ಉಂಟಾಗುತ್ತದೆ. ಹಾಗೆಯೇ ಕಾಂಟ್ರಿಬ್ಯೂಷನ್ ಹಣದ ದರವು ಸಾಮಾನ್ಯ ರೈತರಿಗೆ ವಿಪರೀತ ಭಾರವೆನನಿಸುತ್ತದೆ. ಹಾಗಾಗಿ ಸಾಗುವಳಿ ಪದ್ಧತಿ ಕುರಿತು ರೈತರ ವಿವೇಚನೆಗೆ ಬಿಟ್ಟು ಸರ್ಕಾರ ಕಾದು ನೋಡಬೇಕು ರೈತರ ಜಮೀನಿನಲ್ಲಿ 1/3 ಅಥವಾ 1/4 ಭಾಗದಷ್ಟು ಜಮೀನುಗಳನ್ನು ತನ್ನ ಪದ್ಧತಿಗೆ ಅಳವಡಿಸುವ ಉಸ್ತುವಾರಿ ತೆಗೆದುಕೊಂಡು ಉಳಿದ ಭಾಗದ ರೈತನ ಸಾಗುವಳಿಗೆ ವಂತಿಕೆ (ಕಾಂಟ್ರಿಬ್ಯೂಷನ್) ಹಣವನ್ನು ಮಾಫಿ ಮಾಡಲಿ ಎಂದು ವಿಶ್ಲೇಷಣೆ ಸಲಹೆಗಳನ್ನು ನೀಡಿದರು. ಹಾಗೆಯೇ ಬಿ. ಸೀತಾರಾಮಯ್ಯನವರು ಕೂಡ ಬ್ಲಾಕ್‌ಸಿಸ್ಟಂ ಬೆಳೆ ಪದ್ಧತಿಯನ್ನು ಇರ್ವಿನ್ ನಾಲಾ ಪ್ರದೇಶದ ರೈತರ ಮೇಲೆ ಹೇರಬೇಡಿ ಎಂದು ಸರ್ಕಾರಕ್ಕೆ ಮೊರೆಇಟ್ಟರು.

ಚೆಲುವಯ್ಯನವರು ಇರ್ವಿನ್ ನಾಲಾ ಪ್ರದೇಶದ ಜಮೀನುಗಳು ಒಂದೇ ಮಟ್ಟದಲ್ಲಿಲ್ಲದ ಕಾರಣ ಕಬ್ಬು ಕೃಷಿಗಾರಿಕೆ ಕೆಳಪ್ರದೇಶಗಳಲ್ಲಿ ಪ್ರಗತಿಯಾಗುವುದಿಲ್ಲ. ಹಾಗಾಗಿ ಸರ್ಕಾರದ ಬ್ಲಾಕ್ ಸಿಸ್ಟಂ ಪದ್ದತಿ ಫಲಕಾರಿ ಆಗದೆ ಕಾಲಾನಂತರದಲ್ಲಿ ಈ ನಾಲಾ ಪ್ರದೇಶದಲ್ಲಿ ಸಾಗುವಳಿ ನಿಂತು ಹೋಗಬಹುದು ಅಣೆಕಟ್ಟಿನ ಮೇಲ್ಭಾಗದ ರೈತರುಗಳಿಗೆ ವಂತಿಕೆ

(ಕಾಂಟ್ರಿಬ್ಯೂಷನ್) ಹಣದ ದರವನ್ನು ಎಕರೆಗೆ 60ರೂ. ನಂತೆ ನಿಗಧಿಗೊಳಿಸಿ, ಬಡ್ಡಿ ಬಗೆಗೂ ಕೂಡ ರಿಯಾಯಿತಿ ತೋರಿರುವ ಸರ್ಕಾರ ಈ ನಾಲಾ ಪ್ರದೇಶದ ರೈತರ ಬಗ್ಗೆ ತಾರತಮ್ಯ ತೋರಿರುವುದು ಸರಿಯಲ್ಲ ಇನ್ನು ರಾಜ್ಯದ 67 ತಾಲ್ಲೂಕಿನ ಕಂದಾಯದಾರರ ಹಣದಿಂದ ಜಲಾಶಯವನ್ನು ತಾಲ್ಲೂಕಿನ ಜನರ ಅನುಕ್ಕೂಲಕ್ಕಾಗಿ ನಿರ್ಮಿಸಿದೆ ಎಂಬ ಮಾತು ಸರಿಯಿಲ್ಲ ಮೂಲಭೂತವಾಗಿ ಈ ಜಲಾಶಯ ವಿದ್ಯುತ್ ಉತ್ಪಾದನೆಗಾಗಿ ನಿರ್ಮಿತಗೊಂಡಿದೆ. ಎರಡನೆಯದಾಗಿ ಸಾಗುವಳಿಗೆ ನೀಡುತ್ತಿರುವ ನೀರು, ಬೇಡವಾಗಿರುವ ಹೆಚ್ಚಳದ ನೀರಾಗಿದೆ. ಮೂರನೇಯದಾಗಿ ಮೈಸೂರು ಮಾದರಿ ರಾಜ್ಯ ಎಂದು ಅನ್ಯರಿಗೆ ತೋರಿಸುವ ಸಲುವಾಗಿ ಜಲಾಶಯ ನಿರ್ಮಾಣವಾಗಿದೆ. ರೈತರಿಗೆ ನಿಜಕ್ಕೂ ಅನುಕೂಲವಾಗಬೇಕೆಂದರೆ ಬ್ಲಾಕ್ ಸಿಸ್ಟಂ ಹಾಗೂ ಕಾಂಟ್ರಿಬ್ಯೂಷನ್ ಹಣ ಎರಡನ್ನೂ ಕೈ ಬಿಡಬೇಕು ಎಂದು ತೌಲನಿಕ ವಿಮರ್ಶೆ ನೀಡಿದರು. ಸರ್ ಆಲ್‌ಫ್ರೆಡ್ ಚಟ್ಟರ್‌ಟನ್ ಅವರು ಕೂಡ ಬ್ಲಾಕ್ ಸಿಸ್ಟಂ ಬೆಳೆ ಪದ್ದತಿಯಿಂದ ರೈತರಿಗಾಗುವ ಆರ್ಥಿಕ ನಷ್ಟವನ್ನು ತಿಳಿಸಿ ಮುಚ್ಚಳಿಕೆ ಬರೆದು ಕೊಟ್ಟ ಹೊರತು ನೀರನ್ನು ಜಮೀನಿಗೆ ಬಿಡುವುದಿಲ್ಲ ಎಂಬ ಒತ್ತಾಯವನ್ನು ನಿಲ್ಲಿಸಬೇಕು ಎಂದು ಸಲಹೆಗಳನ್ನು ನೀಡಿದರು.[4]

ಪಿ.ಸೀತಾರಾಮಯ್ಯ ನವರು ಬ್ಲಾಕ್‌ಸಿಸ್ಟಂ ಸಾಗುವಳಿ ಪದ್ಧತಿ ಹಾಗೂ ಕಾಂಟ್ರಿಬ್ಯೂಷನ್ ಹಣದ ದರ ಹೆಚ್ಚಳವನ್ನು ಸಮರ್ಥಿಸಿದರು. ವೆಂಕಟರಮಣೇಗೌಡರು ಬ್ಲಾಕ್‌ಸಿಸ್ಟಂ ಬೆಳೆ ಪದ್ಧತಿಯನ್ನು ಹೇರಬಾರದೆಂದೂ ಅಧಿಕ ವಂತಿಕೆ ಹಣ ತೆರಬೇಕೆನ್ನುವುದು ಸಮರ್ಥನೀಯವಲ್ಲವೆಂದರು. ಇವರ ಮಾತನ್ನು ಬೆಂಬಲಿಸಿದ ಇಬ್ರಾಹಿಂ ಖಾನ್ ಅವರು ಈ ದರವನ್ನು ಕಡಿಮೆ ಮಾಡಬೇಕು ಎಂದು ಹೇಳಿದರು ಬಿ. ಉಸ್ಮಾನ್ ಖಾನ್‌ರು ಸರ್ಕಾರದ ಈ ಕ್ರಮಗಳನ್ನು ಸಮರ್ಥಸಿದರು.

ಈ ಸಂದರ್ಭದಲ್ಲಿ ಮಾತನಾಡಿದ ಕೃಷ್ಣರಾಜಸಾಗರ ವರ್ಕ್ಸ್‌ನ ಕಾರ್ಯದರ್ಶಿಗಳು "ಬ್ಲಾಕ್‌ಸಿಸ್ಟಂ" ಸಾಗುವಳಿಯನ್ನು ಅನುಸರಿಸುವುದರಿಂದ ಆಗುವ ಅನುಕೂಲಗಳನ್ನು

ವಿವರಿಸಿದರು. ಸಂಗ್ರಹಿತ ನೀರಿನ ಪ್ರಮಾಣದಲ್ಲಿ ಸುಮಾರು 1/6 ನೇ ಭಾಗವನ್ನು ಮಾತ್ರ ವಿದ್ಯುತ್ ಉತ್ಪಾದನೆಗೆ ಬಳಸಬೇಕೆಂದಿದೆ. ಹೀಗಾಗಿ ಕಂದಾಯದಾರರಿಂದ ಸರ್ಕಾರಕ್ಕೆ ಸಮುಚಿತ ಮೊತ್ತ ಒದಗಬೇಕಿದೆ. ಮದ್ರಾಸ್ ರಾಜ್ಯದ ಜೊತೆ ಆಗಿರುವ ಒಪ್ಪಂದದಂತೆ ಈ ಜಲಾಶದಿಂದ ಒಂದು ಲಕ್ಷ ಇಪ್ಪತ್ತೈದು ಸಾವಿರ ಎಕರೆಯಷ್ಟು ಸಾಗುವಳಿಗೆ ಮಾತ್ರ ನೀರಿನ ಬಳಕೆಗೆ ಅವಕಾಶವಿದೆ. 60 ಮೈಲಿ ಉದ್ದ 20 ಮೈಲಿ ಅಗಲ ವಿಸ್ತಾರದ ಅಚ್ಚುಕಟ್ಟು ನಾಲಾ ಪ್ರದೇಶದಲ್ಲಿ ಇಡೀ ವರ್ಷ ಭತ್ತವನ್ನೇ ಬೆಳೆಯುತ್ತಿದ್ದರೆ, ನೀರಿನ ಹೆಚ್ಚಿನ ಪ್ರಮಾಣ ಕೆಳಗಿನ ನದಿಗೆ ಹೋಗಿ ದಂಡವಾಗುತ್ತದೆ. ಈ ಪ್ರದೇಶದ ಜನರ ಆರೋಗ್ಯ ಸತತ ನೀರಿನ ನಿಲುಗಡೆಯಿಂದ ಕೆಡುತ್ತದೆ ಎಂದು ಹೇಳಿ ಸರ್ಕಾರದ ಕ್ರಮವನ್ನು ಸಮರ್ಥಿಸಿಕೊಂಡರು.

ಪ್ರತಿನಿಧಿ ಸಭೆಯ 1931ರ ಅಕ್ಟೋಬರ್‌ನ ಮತ್ತೊಂದು ಅಧಿವೇಶನದಲ್ಲಿ ಇರ್ವಿನ್ ನಾಲೆಗೆ ಸಂಬಂಧಿಸಿದ ವಾರ್ಷಿಕ ವೆಚ್ಚ ಸಿಬ್ಬಂದಿ ಹಾಗೂ ಉಸ್ತುವಾರಿ ವೆಚ್ಚ ಜಾತಿವಾರು ನೇಮಕಾತಿ ಗುತ್ತಿಗೆ ನೀಡಿಕೆ ಇತ್ಯಾದಿಗಳ ಬಗ್ಗೆ ಎಂಸಿ.ಲಿಂಗೇಗೌಡ, ಹೆಚ್.ಸಿ.ದಾಸಪ್ಪ, ಕಪನಿಗೌಡ, ಡಿ.ಎಸ್.ಮಲ್ಲಪ್ಪ, ಅವರುಗಳು ಚರ್ಚಿಸಿ ರೈತರ ಮೇಲೆ ಬೀಳುವ ಕಂದಾಯ ಹಾಗೂ ಬೆಳೆ ಪದ್ಧತಿಯ ಅಳವಡಿಕೆಯ ಪರಿಣಾಮಗಳ ಹಿನ್ನೆಲೆಯನ್ನು ಸ್ಪಷ್ಟಗೊಳಿಸಲು ಯತ್ನಿಸಿದ್ದಾರೆ ಅಲ್ಲದೆ ಮಂಡ್ಯ ಮದ್ದೂರು, ಮಳವಳ್ಳಿ ತಾಲ್ಲೂಕು ರೈತರಿಂದ ವಂತಿಕೆ ವಸೂಲಿ, ನೀರಿನ ದರಗಳು, ಬ್ಲಾಕ್ ಸಿಸ್ಟಂ ಕೃಷಿ ಫಾರಂಗಳಿಗೆ ವಶಪಡಿಸಿಕೊಂಡ ಜಮೀನುಗಳು ಇವುಗಳ ಬಗ್ಗೆ ಅಹವಾಲು ಪ್ರತಿನಿಧಿ ಬೇಡಿಕೆಗಳು ಬಂದಿವೆಯೇ? ಅದನ್ನು ನಾಲಾ ಸಮಿತಿ ಪರಿಶೀಲಸಿತೇ? ಸರ್ಕಾರ ನಿಗಧಿಗೊಳಿಸಿದ ಸದ್ಯದ ವಂತಿಕೆ ದರದ ಹೆಚ್ಚಳವೆ? ಬಡ್ಡಿಯನ್ನು ಕಂತಿನ ಹಣದ ಮೇಲೆ ವಸೂಲು ಮಾಡಲಾಗಿದೆಯೇ? ಎಂದೆಲ್ಲ ಪ್ರಶ್ನೆಗಳಿಗೆ ಉತ್ತರ ಪಡೆದು ಅಧಿವೇಶನದಲ್ಲಿ ಅಮೂಲಾಗ್ರವಾಗಿ ರೈತ ಸಮಸ್ಯೆಗಳಿಗೆ ಈ ಶಾಸಕರು ಸ್ಪಂದಿಸಿದ್ದಾರೆ ರೈತರಿಂದ ನೆನಪಿನೋಲೆಗಳು ಹಾಗೂ ಪ್ರತ್ಯಕ್ಷ ಬೇಟಿಗಳೂ ಸರ್ಕಾರದೊಡನೆ ಆಗಿರುವುದು, ಸರ್ಕಾರದ ಉತ್ತರದಿಂದ ವಿದಿತವಾಗುತ್ತದೆ. ಸರ್ಕಾರದ ಸಮರ್ಥನೆ ಎಲ್ಲರೂ ಶಾಸಕರು ರೈತರ ಸಂಕಷ್ಟಗಳಿಗೆ ಪರಿಹಾರದ ಪರವಾಗಿ ವಾದಿಸಿದ್ದಾರೆ.[5]

ಜೂನ್ 7, 1932ರ ಪ್ರತಿನಿಧಿ ಸಭೆಯ ಅಧಿವೇಶನದಲ್ಲಿ ಆರ್.ಗೋಪಾಲಸ್ವಾಮಿ ಅಯ್ಯರ್ ಮತ್ತು ಎಸ್.ಸಿ. ಮಲ್ಲಯ್ಯನವರು[19] ಇರ್ವಿನ್ ನಾಲೆಯನ್ನು ರೂಪಿಸುವ ಮೊದಲು ತಾತ್ಕಲಿಕ ಹಿಡುವಳಿಯಾಗಿ ದಲಿತ ವರ್ಗದ ರೈತರು ಪಡೆದಿದ್ದ ಖುಷ್ಕಿ ಜಮೀನುಗಳು ತರೀ ಜಮೀನುಗಳಾಗಿ ಪರಿವರ್ತಿತವಾಗಿರುವ ಕಾರಣ ಅವರ ಕೈ ತಪ್ಪಿವೆ. ಜೀವನೋಪಾಯಕ್ಕೆ ಅನ್ಯ ಮಾರ್ಗವಿಲ್ಲದ ಕಾರಣ ಪ್ರತಿ ವರ್ಷ ದಂಡತೆತ್ತು ಈ ಜಮೀನುಗಳನ್ನು ಸಾಗುವಳಿ ಮಾಡಿಕೊಳ್ಳುತ್ತಿದ್ದಾರೆ. ಅಂಥವರಿಗೆ ವಂತಿಕೆ ವಸೂಲಿಯಲ್ಲಿ ಹೆಚ್ಚಿನ ಕಾಲಾವಧಿ ನೀಡಿ ರಿಯಾಯಿತಿ ತೋರಿಸಬೇಕೆಂದು ಸೂಚಿಸಿದರು. ಸರ್ಕಾರವು ಇರ್ವಿನ್ ನಾಲಾ ಪ್ರದೇಶದಲ್ಲಿ ಉಚಿತ ಜಮೀನು ನೀಡಿಕೆ ಅಥವಾ ರಿಯಾಯಿತಿ ದರದ ಕಂದಾಯ ನೀಡಲು ಅವಕಾಶ ಮಾಡಿಲ್ಲ. ಆದರೂ ಈ ದಲಿತ ವರ್ಗದ ಕುರಿತು ಬೇಡಿಕೆಯನ್ನು ಪರಿಶೀಲಿಸುವುದೆಂಬ ಉತ್ತರ ಸರ್ಕಾರದಿಂದ ಒದಗಿತು.[6]

1932 ಜೂನ್ 8 ರ ಕಾರ್ಯಕಲಾಪಗಳಲ್ಲಿ ಇರ್ವಿನ್‌ನಾಲಾ ಪ್ರದೇಶದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿಸುವ ಬಗ್ಗೆ ಅರ್.ಸುಬ್ಬರಾವ್ ಮತ್ತು ಟಿ.ಸಿದ್ದಲಿಂಗಯ್ಯನವರು ಪ್ರಸ್ತಾಪಿಸಿದರು. ಈ ಸಂಬಂಧದಲ್ಲಿ ರೈತರಿಂದ ಬೆಳೆದ ಕಬ್ಬುನ್ನು ಸಕ್ಕರೆ ಕಾರ್ಖಾನೆಗೆ ಒದಗಿಸಲೇ ಬೇಕೆಂಬ ಮುಚ್ಚಳಿಕೆಯನ್ನು ಒತ್ತಾಯದಿಂದ ಪಡೆಯಲಾಗುತ್ತಿದೆ ಎಂದು ಬಿ.ಎಸ್.ಪುಟ್ಟಸ್ವಾಮಿಯವರು ಪ್ರಶ್ನಿಸಿದರು. ಅದಕ್ಕೆ ಸರ್ಕಾರವು ಒತ್ತಾಯದಿಂದ ಪಡೆದುಕೊಂಡಿಲ್ಲವೆಂದು ಕಬ್ಬು ಸರಬರಾಜಿನ ಬಗ್ಗೆ ಖಾತರಿಯೆ ಇಲ್ಲದೆ ಸಕ್ಕರೆ ಕಾರ್ಖಾನೆ ಆರಂಭಿಸಲು ಸಾಧ್ಯವಿಲ್ಲವೆಂದು ಹೇಳಿತು.[7] ಇದೇ ತಿಂಗಳ ಮತ್ತೊಂದು ಅಧಿವೇಶನದಲ್ಲಿ ಹೊನ್ನಯ್ಯನವರು, ಇರ್ವಿನ್ ನಾಲಾ ಪ್ರದೇಶದ ರೈತರು ತಮ್ಮ ಕಷ್ಟಗಳನ್ನು ಕುರಿತು ಚರ್ಚಿಸಲು ಸಭೆ ಏರ್ಪಡಿಸಿಕೊಳ್ಳುವುದಕ್ಕೆ ಜಿಲ್ಲಾ ಮ್ಯಾಜಿಸ್ಟ್ರೇಟ್ ಅವರು ನಿಷೇಧಾಜ್ಞೆ ವಿಧಿಸಿದ್ದಾರೆ. ಇದರಿಂದ ತಮ್ಮ ಶಾಸಕ ಪ್ರತಿನಿಧಿಗಳ ಗಮನಕ್ಕೆ ತಮ್ಮ ಸಂಕಷ್ಟಗಳನ್ನು ತರಲು ಅವಕಾಶವಾಗದಿದ್ದರೆ, ರೈತರಿಗೆ ತುಂಬಾ ತೊಂದರೆ ಆಗುತ್ತದೆ. ಅದಕ್ಕಾಗಿ ದಿವಾನರು ಮಂಡ್ಯಕ್ಕೆ

ಭೇಟಿ ನೀಡಿ ಇರ್ವಿನ್ ನಾಲಾ ಪ್ರದೇಶದ ರೈತರ ಕುಂದು ಕೊರತೆಗಳನ್ನು ಮತ್ತೊಮ್ಮೆ ವಿಚಾರಿಸಿ ಆ ಬಗ್ಗೆ ದೃಢ ಪಡಿಸಿಕೊಳ್ಳಬೇಕೆಂದು ವಿನಂತಿಸಿದರು.[8] ಈ ಅಂಶಗಳು ಸರ್ಕಾರದ ಧೋರಣೆ, ಪ್ರತಿನಿಧಿಗಳ ನಿರಂತರ ರೈತರ ಕಷ್ಟ ಪರಿಹಾರ ಪರ ನಿಲ್ಲುವ ಪ್ರವೃತ್ತಿ ತೋರುತ್ತದೆ.

1934 ರ ಜೂನ್-ಜುಲೈ ತಿಂಗಳ ಲೆಜಿಸ್ಲೇಟಿವ್ ಕೌನ್ಸಿಲ್‌ನ ಅಧಿವೇಶನದಲ್ಲಿ ಎಸ್.ಸಿ.ಮಲ್ಲಯ್ಯನವರು ವಂತಿಕೆ ಹಣವನ್ನು 100ರೂ ನಿಂದ 150 ರೂಗೆ ಬದಲಾಯಿಸಲು ಕಾರಣ ಕೇಳಿದಾಗ ಸರ್ಕಾರದ ಕಾರ್ಯದರ್ಶಿ ಎನ್.ಎನ್.ಅಯ್ಯಂಗಾರ್ ಅವರು ನಾಲಾ ನೀರಿನ ಬಳಕೆದಾರರ ಮೇಲೆ ಅದನ್ನು ಸರ್ಕಾರದ ಆಜ್ಞೆಯಂತೆ ಹಾಕಲಾಗಿದೆ. ಹಾಗೂ ತಮ್ಮ ಹಿಡುವಳಿ ಜಮೀನಿನಿಂದ 1/3ನೇ ಭಾಗವನ್ನು ಬಿಟ್ಟುಕೊಡಲು ಒಪ್ಪದಿದ್ದ ಕಾರಣ ಈ ದರದ ವಸೂಲಿಗೆ ಆಜ್ಞೆ ಮಾಡಲಾಗಿದೆ ಎಂದರು. ಇದನ್ನು ಕಂದಾಯ ಹಾಗೂ ಪಬ್ಲಿಕ್ ವರ್ಕ್ಸ್ ಇಲಾಖೆಯೊಡನೆ ಸಮಾಲೋಚಿಸಿ ನಿರ್ಧರಿಸಲಾಗಿದೆ ಎಂದು ರೈತರು ಒಪ್ಪಿದ ಸಂದರ್ಭವನ್ನು ವಿವರಿಸಿದರು. ಇದಕ್ಕೆ ಮುಖ್ಯಕಾರಣ ತಮ್ಮ ಹಿಡುವಳಿಯ ಭಾಗವನ್ನು ಬಿಟ್ಟುಕೊಡುವ ಬದಲು ಹೆಚ್ಚಿನ ದರ ನೀಡುವುದೇ ರೈತರಿಗೆ ಅನುಕೂಲವಾಗಿ ಕಂಡು ಬಂದಿರಬಹುದೆನಿಸುತ್ತದೆ. [9]

1932 ರಲ್ಲಿ ಮಂಡ್ಯದಲ್ಲಿ ದಿವಾನರು ರೈತರನ್ನು ಭೇಟಿ ಮಾಡಿದಾಗ ನಡೆದ ಮಾತುಕತೆಗಳು. ಆ ನಡವಳಿಕೆಗಳು ಅಧಿಕಾರಿವಲಯ ಹಾಗೂ ರೈತ ಸಮಿತಿಯ ಕಡೆಯಿಂದ ಹೇಗೆ ವಿಶದೀಕರಣಗೊಂಡಿವೆ ಎಂಬುದನ್ನು ತಿಳಿಸಲು ಪ್ರಯತ್ನಿಸಲಾಗಿದೆ. ಇದಕ್ಕೂ ಮೊದಲು ವಿಶ್ವ ಕರ್ನಾಟಕ ಪತ್ರಿಕೆಯು ಇರ್ವಿನ್ ನಾಲಾ ರೈತರು ದಿವಾನ್ ಕಛೇರಿಗೆ ಕಾಲ್ನಡಿಗೆ ಯಾತ್ರೆ ಕೈಗೊಂಡ ಬಗ್ಗೆ ದಿವಾನರಿಂದಲೇ ಮೆಚ್ಚುಗೆ ಪಡೆದ ವಿಷಯವನ್ನು ಸಂಪಾದಕೀಯದಲ್ಲಿ ಪ್ರಕಟಿಸಿತು.

1932 ಜುಲೈ 12 ರಂದು ರೈತರ ಮಹಾಸಭೆ ನಡೆದದನ್ನು ವಿಶ್ವ ಕರ್ನಾಟಕ ಪತ್ರಿಕೆಯು ತಿ.ತಾ. ಶರ್ಮರವರ ಸಂಪಾದಕೀಯದಲ್ಲಿ ಹೊರತಂದಿದೆ. ಇರ್ವಿನ್ ನಾಲಾ ಸಂಬಂಧವಾಗಿ ಈ ರೈತ ಮಂಡಳಿಯವರೂ ಮದ್ದೂರು, ಮಂಡ್ಯ ತಾಲ್ಲೂಕ್‌ಗಳಲ್ಲಿ ಮಾತನಾಡಬಾರದು ಯಾವ

ಬಗೆಯ ಚಳವಳಿಯನ್ನು ನಡೆಸಬಾರದೆಂದು ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟರು ಅವರ ಮೇಲೆ ಶಾಸನವನ್ನು ವಿಧಿಸಿದರು. ಈ ಮಂಡಲಿಯವರು ಜೂನ್ 8 ರಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ತಮ್ಮ ಕಷ್ಟಗಳನ್ನು ಹೇಳಲು ಸಾರ್ವಜನಿಕ ಸಭೆ ನಡೆಸಲು ಸಿದ್ಧಗೊಂಡಿದ್ದರು ಆದರೆ ಅವರ ಮೇಲೆ ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟರು ಪೋಲಿಸ್ ಶಾಸನದ 39 ನೇ ಸೆಕ್ಷನ್‌ನ್ನು ಪ್ರಯೋಗಿಸಿ ಮೈಸೂರು ನಗರ, ಸುತ್ತ 5 ಮೈಲಿಗಳ ಪ್ರದೇಶದಲ್ಲೂ 2 ತಿಂಗಳು ಕಾಲ ಸಭೆ ಭಾಷಣಗಳು ಇತ್ಯಾದಿಯನ್ನು ಇರ್ವಿನ್ ನಾಲಾ ಸಂಬಂಧವಾಗಿ ನಡೆಸಬಾರದೆಂದು ಸುಗ್ರೀವಾಜ್ಞೆ ಹೊರಡಿಸಿದರು. ಇದು ಸರ್ಕಾರವು ರೈತರ ಕಷ್ಟಗಳ ಪರಿಹಾರ ವಿಚಾರದಲ್ಲಿ ನಿರ್ಲಕ್ಷ್ಯ ತಾಳಿರುವುದನ್ನು ಸೂಚಿಸುತ್ತದೆ.

ಇರ್ವಿನ್ ನಾಲಾ ರೈತರ ಸಂಬಂಧದ ವಂತಿಕೆ ಸಾಲದ ಬಡ್ಡಿ ಇತ್ಯಾದಿ ಅನೇಕ ವಿಚಾರಗಳಲ್ಲಿ ಸರ್ಕಾರದವರು ಮೊದಲಿನಿಂದ ಇಂದಿನವರೆಗೂ ಎಷ್ಟು ಬಾರಿ ಬದಲಾವಣೆ ಮಾಡಿದ್ದಾರೆ? ಎಷ್ಟು ತಿದ್ದುಪಡಿಗಳನ್ನು ಮಾಡಿದ್ದಾರೆ? ಇವುಗಳ ಅರ್ಥವಾದರೂ ಏನೂ? ಇತ್ಯಾದಿಯಾಗಿ ಸರ್ಕಾರದ ಕ್ರಮವನ್ನು ಟೀಕಿಸಿದ ರೈತ ಸಮಿತಿಯು ಅವು ಅಸಮರ್ಪಕ ಅಸಮಾಧಾನವಾಗಿವೆ. ಅನುಭವ ಲೋಪದಿಂದಾಗುವ ದೋಷದಿಂದ ಕೂಡಿವೆ ಎಂದು ಹೇಳಿತು. ಹೀಗೆ ರೈತರು ಅವರ ದುಃಖವನ್ನು ಸಕಾರಣವಾಗಿ ನ್ಯಾಯಮಾರ್ಗದಿಂದ ಶಾಂತ ಚಿತ್ತದಿಂದ ಪ್ರಕಟಗೊಳಿಸಲು ಪ್ರಯತ್ನಿಸಿದರೆ ಅವರನ್ನು ತಡೆಯುವುದು ಸರಿಯಲ್ಲ. ರೈತರು ಸರಳರು, ಶೀಲವಂತರು., ರಾಜಭಕ್ತಿಯುಳ್ಳವರು. ಬೆನ್ನು ತಟ್ಟಿದರೆ ಭಕ್ತಿಯಿಂದ ದುಡಿಯುವರು. ಬೆದರಿಸಿದರೆ ತಿರುಗಿ ಬೀಳುವರು. ಹಾಗಾಗಿ ಇರ್ವಿನ್ ನಾಲಾ ರೈತರ ವಿಚಾರದಲ್ಲಿ ಸರ್ಕಾರಕ್ಕೆ ಅನುಮಾನ ಭಯ ಕಾಯತೊಡಗಿದೆ. ರೈತರಿಗೂ ಸರ್ಕಾರಿ ಅಧಿಕಾರಗಳ ವಿಚಾರದಲ್ಲಿ ಅನುಮಾನ ಭಯ ಹುಟ್ಟಿದೆ ಇವರಿಬ್ಬರ ಸಂದೇಹ ಭಯ ಹೋಗಲಾಡಿಸಲು ಅವಶ್ಯವಾದದ್ದು ಸಹಾಯಭೂತಿ, ತಾಳ್ಮೆ ಆದರೆ ಸರ್ಕಾರಕ್ಕೆ ಇವೆರಡೂ ಪೂರ್ಣವಾಗಿ ಅಭಾವವಾಗಿರುವಂತೆ ಕಾಣಿಸುತ್ತದೆ ಎಂದು ವಿಶ್ವ ಕರ್ನಾಟಕ ಪತ್ರಿಕೆಯು ತಿ.ತಾ. ಶರ್ಮಾರವರ ಸಂಪಾದಕೀಯತ್ವದಲ್ಲಿ ಪ್ರಕಟಗೊಳಿಸಿತು.[10] (ಜೂನ್ 12,

1932) ಈ ಲೇಖನದಲ್ಲಿ ಅಂದಿನ ಅಧಿಕಾರಿಗಳ ವರ್ತನೆ ಹಾಗೂ ರೈತ ಚಳವಳಿ ನಡೆದರೂ ಸಂಯಮ, ಸಾಮ್ಯದ ಗೆರೆದಾಟದಿರುವ ರೈತರ ವರ್ತನೆಗಳ ತೌಲನಿಕ ಚಿತ್ರಣವನ್ನು ಕಾಣಬಹುದು.

## 6.1 ಇರ್ವಿನ್ ನಾಲಾ ರೈತರ ಮಹಾಸಭೆ-ಮಂಡ್ಯ (1932)

ದಿವಾನರು 1932, ಜುಲೈ 7 ರಂದು ಮಂಡ್ಯಕ್ಕೆ ಭೇಟಿ ನೀಡಿ ಇರ್ವಿನ್ ನಾಲಾ ರೈತರೊಂದಿಗೆ ಮಾತನಾಡಿ ಅವರು ಹೇಳುವುದನ್ನು ಕೇಳಿ ಸಮಾಧಾನಕೊಟ್ಟರೆಂಬ ವಿಷಯದಲ್ಲಿ ಪ್ರಭುತ್ವ ಹಾಗೂ ರೈತ ಮಂಡಲಿಯೂ ಬೇರೆ ಬೇರೆ ವರದಿಗಳನ್ನು ನೀಡಿವೆ.

ಪ್ರಭುತ್ವದ ವರದಿ ಪ್ರಕಾರ- ದಿವಾನರು ರೈತರ ಸಹಕಾರ ಕೇಳಿ ತಮ್ಮ ಜಮೀನನ ಹಂತದ ತಾಕುಗಳುಲ್ಲಿ ಯಾವ ಬೆಳೆಯನ್ನಾದರು ಬೆಳೆಯಲಿ ಎಂದರು. ಆದರೆ ರೈತರು ತಾಕುವಾರು ಶಿಸ್ತಿನ ಜಮೀನುಗಳನ್ನು ಮೂರು -ಮೂರು ಮೂಲ ಹಂತಗಳಾಗಿ ವಿಭಾಗಿಸಿ ಅವುಗಳಲ್ಲಿ ಸರದಿಯಂತೆ ಭತ್ತ, ಕಬ್ಬು ಮತ್ತು ಖುಷ್ಕಿ ಬೆಳೆಗಳನ್ನು ಬೆಳೆಯುವುದಕ್ಕೆ ಎಂದು ಸರ್ಕಾರ ನಿರ್ಬಂಧಿಸಿರುವುದರಿಂದ ರೈತರಿಗೆ ತೊಂದರೆ ಉಂಟಾಗಿದೆ. ಅದಕ್ಕೆ ಬದಲಾಗಿ ಎರಡು-ಎರಡು ಹಂತಗಳಾಗಿ ವಿಭಾಗಿಸಿ ಒಂದೊಂದರಲ್ಲಿ ತರೀ ಬೆಳೆಯುವುದಕ್ಕೂ ಅವಕಾಶ ಕೊಡಬೇಕೆಂದು ತಿಳಿಸಿದರು. ಆದರೆ ದಿವಾನರು ಜಮೀನುಗಳನ್ನು ಎರಡು ತಾಕುಗಳಾಗಿ ವಿಭಾಗಿಸಿದರೆ ತಾಕುವಾರು ಶಿಸ್ತಿಗೆ ಅರ್ಥವಿಲ್ಲ. ಕೃಷಿ ಯೋಗಕ್ಷೇಮದ ದೃಷ್ಟಿಯಿಂದ ಮತ್ತು ರೈತರಿಗೆ ಹೆಚ್ಚು ಲಾಭ ಬರುವ ದೃಷ್ಟಿಯಿಂದ ಪರ್ಯಾಲೋಚಿಸಿದರೂ ಕೂಡ ಜಮೀನುಗಳನ್ನು ಎರಡು-ಎರಡು ತಾಕುಗಳಾಗಿ ವಿಭಾಗಿಸುವುದು ಸೂಕ್ತವಲ್ಲವೆಂದರು ಕೊನೆಗೆ ದಿವಾನರು ಇರ್ವಿನ್ ನಾಲಾ ಪ್ರದೇಶದಲ್ಲಿ ತಾಕುವಾರು ಸಾಗುವಳಿ ಶಿಸ್ತಿನ ಮೇಲೆ ಸರದಿಯಲ್ಲಿ ವ್ಯವಸಾಯ ನಡೆಸುವುದನ್ನು ಆಚರಣೆಗೆ ತಂದಿರುವುದು ರೈತರಿಗೆ ಸಮ್ಮತವಾಗಿದೆ ಎಂದು ಗೊತ್ತಾಯಿತು ಎಂದು ಹೇಳಿದರು ಹೀಗಾಗಿ ಸರ್ಕಾರದ ದೃಷ್ಟಿಯಲ್ಲಿ ಈ ಸಭೆ ಸಫಲವಾಯಿತು ಎಂಬ ವರದಿ ಬಂತು.

ಆದರೆ ರೈತ ಸಮಿತಿ ಕೊಟ್ಟ ವರದಿ ಇದಕ್ಕೆ ತದ್ವಿರುದ್ಧವಾಗಿತ್ತು. ಸಭೆಗೆ ದಿವಾನರು ಬಂದ ಮೇಲೆ ರೈತರಿಗೆ ನಾಲಾ ಸಾಗುವಳಿ ತೊಂದರೆ ಬಗ್ಗೆ ತಿಳಿಸಲು ಹೇಳಿದರು ನಂಜಪ್ಪಶೆಟ್ಟರು ಇರ್ವಿನ್ ನಾಲಾ ರೈತ ಮಂಡಲಿ ಪರವಾಗಿ ಅರ್ಜಿಯನ್ನು ಓದಿ ಪೊಲೀಸ್ ಶಾಸನ 39ನೇ ಸೆಕ್ಷನ್ ಜಾರಿ ನ್ಯಾಯವಲ್ಲ ಎಂದು ತಿಳಿಸಿ ಸಾವಿರಾರು ಮಂದಿ ರೈತರು ರುಜು ಮಾಡಿದ ಅಹವಾಲನ್ನು ದಿವಾನರಿಗೆ ಒಪ್ಪಿಸಿದರು ನಂತರ ದಿವಾನರು ಸರ್ಕಾರ ಇಷ್ಟೊಂದು ಹಣ ಖರ್ಚು ಮಾಡಿ ರೈತರ ಉಪಕಾರಕ್ಕಾಗಿ ನೀರು ತಂದಿದೆ. ಅದನ್ನು ಬಳಸಲು ಒತ್ತಾಯವಿಲ್ಲ, ಕೇವಲ ಭತ್ತ ಬೆಳೆದರೆ ಶೀತ ವಾತಾವರಣದಿಂದ ಮಲೇರಿಯಾಕ್ಕೆ ಕಾರಣವಾಗುತ್ತದೆ, ಜೊತೆಗೆ ಹೆಚ್ಚು ಹಣ ಸಿಗುವುದಿಲ್ಲ ಅದಕ್ಕಾಗಿ ಕಬ್ಬನ್ನು ಬೆಳೆಯಿರಿ ಎಂದರು.

ಅದಕ್ಕೆ ಪ್ರತಿಯಾಗಿ ಗಾಣದಾಳು ಲಿಂಗೇಗೌಡರು ಕಾಂಟ್ರಿಬ್ಯೂಷನ್ ನೀರು ಸರದಿ ದರಗಳು ಹೆಚ್ಚು, ಬ್ಲಾಕ್‌ಸಿಸ್ಟಂ ವ್ಯವಸಾಯ ಕಷ್ಟ ಒಂದು ತರಿ, ಒಂದು ಬಾಗಾಯಿತು ಎಂದು ಎರಡು ಬ್ಲಾಕು ಮಾಡಬೇಕೆಂದು ಕೇಳಿಕೊಂಡರು ಆದರೆ ನವರತ್ನ ರಾಮರಾಯರು ಬ್ಲಾಕ್ ಸಿಸ್ಟಂನ್ನು ಸಮರ್ಥಿಸಿದರು ಹೆಚ್.ಹೊನ್ನಯ್ಯನವರು, ವರಗೆರೆಹಳ್ಳಿ ಹೊನ್ನಗಿರಿಗೌಡರು, ಗೆಜ್ಜಲಗೆರೆ ಮರಿಶ್ಯಾಮಗೌಡರು, ಕೀಲಾರದ ಚಿಕ್ಕ ತಮ್ಮಯ್ಯ ಮುಂತಾದ ರೈತರು ಮೂರು ಬ್ಲಾಕುಗಳ ಬದಲಾಗಿ ಎರಡು ಬ್ಲಾಕುಗಳಿರಬೇಕೆಂದು ಬೇಡಿಕೊಂಡರು ಎರಡು ಭಾಗ ಮಾಡಿ ಒಂದು ಭಾಗ ತರಿ, ಇನ್ನೊಂದು ಭಾಗ ಬಾಗಾಯಿತು ಮಾಡಿ, ಬಾಗಾಯಿತುವಿನಲ್ಲಿ ಕಬ್ಬು ಆಲೂಗಡ್ಡೆ, ಈರುಳ್ಳಿ ಮುಂತಾದವನ್ನು ಬೆಳೆಯುತ್ತೇವೆ. ಇಲ್ಲದಿದ್ದರೆ ತರೀ ಭಾಗದಲ್ಲಿ ಅನುಕೂಲವುಳ್ಳವರು ಕಬ್ಬು ಹಾಕಿ ಕೊಳ್ಳುತ್ತೇವೆ. ತರೀಭಾಗಕ್ಕೆ ಈಗ ಹಾಕಿರುವಷ್ಟಕ್ಕೆ ಕಾಂಟ್ರಿಬ್ಯೂಷನ್ ಮತ್ತು ನೀರು ಸರಿದಿ ಕೊಡುತ್ತೇವೆ. ಖುಷ್ಕಿ ಭಾಗಕ್ಕೆ ಅವುಗಳನ್ನು ವಜಾಮಾಡಿ ಅಥವಾ ನೀರು ತೆಗೆದುಕೊಂಡವರಿಗೆ ನ್ಯಾಯವಾದಷ್ಟು ಅವರಿಂದ ಪಡೆದುಕೊಳ್ಳಿ ಭತ್ತದ ಭಾಗದಲ್ಲಿ ಕಬ್ಬು ಹಾಕಿದರೆ ಭತ್ತ ಕಟಾವು ಆದ ಮೇಲೆ ಕಬ್ಬಿಗೆ ನೀರು ಇಲ್ಲ ಎಂದು ಹೇಳುತ್ತೀರಿ ಅಂತ್ಯದ ಕಾಲದಲ್ಲಿ ಕಬ್ಬಿಗೆ ತಿಂಗಳಿಗೆ ಹದ ಸಾಕಾಗುತ್ತದೆ. ಭತ್ತ ಕಟವಾದ ಮೇಲೆ

ಎರಡು-ಮೂರು ಹದ ನೀರು ಕೊಡುವ ವ್ಯವಸ್ಥೆ ಮಾಡಿ ಎಂದು ಬಹಳವಾಗಿ ರೈತರು ಬೇಡಿಕೊಂಡರು.

ನಂತರ ದಿವಾನರು ರೈತರು ಕೇಳಿಕೊಳ್ಳುವುದು ನ್ಯಾಯವಾದುದ್ದಾಗಿದೆ. ಅದರಂತೆ ಮಾಡಲು ಏಕಾಗುವುದಿಲ್ಲ ಕಾರಣ ತಿಳಿಸಿ ಎಂದು ಅಧಿಕಾರಿಗಳನ್ನು ಕೇಳಿದರು. ಆಗ ಅಧಿಕಾರಿಗಳು ದಿವಾನರ ಕಿವಿಯಲ್ಲಿ ಏನೋ ಹೇಳಿದರು ಆಗ ಕೋಲಾರದ ತಮ್ಮಯ್ಯನವರು ದಿವಾನರನ್ನು ಕುರಿತು, "ಸ್ವಾಮಿ ಅಧಿಕಾರಿಗಳು ನಿಮ್ಮ ಕಿವಿಯಲ್ಲಿ ಏನೇನೋ ಹೇಳಿ ನಮ್ಮ ಕಷ್ಟಗಳು ಪರಿಹಾರವಾಗದಂತೆ ಅಡ್ಡಿ ಪಡಿಸುತ್ತಿದ್ದಾರೆ" ಎಂದು ಸರ್ಕಾರದ ಆಕ್ಷೇಪಣೆಗಳಿಗೆಲ್ಲಾ ಸರಿಯಾದ ಉತ್ತರ ಹೇಳಿ ರೈತರ ಕಷ್ಟಗಳನ್ನು ವಿವರಿಸಿದರು.

ಕೊನೆಗೆ ಎಸ್.ಸಿ. ಮಲ್ಲಯ್ಯನವರು, ಹೊಂಬಮ್ಮನವರ ಲಿಂಗೇಗೌಡರು, ಗುರುದೇವರಹಳ್ಳಿ ಕೆಂಪಯ್ಯನವರು, ದೊಡ್ಡರಸಿನಕೆರೆ ಚಿಕ್ಕೇಗೌಡರು, ಪುಟ್ಟೇಗೌಡರು ಮುಂತಾದವರು ರೈತರ ಕಷ್ಟ ನಷ್ಟವನ್ನು ವಿವರಿಸಿ ಪರಿಹಾರಕ್ಕಾಗಿ ಯಾಚಿಸಿದರು. ದಿವಾನರು ರೈತರನ್ನು ಕುರಿತು "ಹಳೇ ದಾರಿಯಲ್ಲೇ ಹೋಗಲು ಹಠಬೇಡ ನನ್ನ ಜೊತೆಯಲ್ಲಿ ಸ್ವಲ್ಪ ದೂರ ಬನ್ನಿ ಕಷ್ಟವೆಂದರೆ ಹಿಂದಕ್ಕೆ ಹೋಗುವಿರಿ, ಬರುವುದೇ ಇಲ್ಲವೆಂದು ಹಠ ಮಾಡಬೇಡಿ" ಎಂದರು. ಅದಕ್ಕೆ ರೈತ ಮುಖಂಡರು "ಬರುವುದೇ ಇಲ್ಲವೆಂದು ಹಠವಲ್ಲ ಸ್ವಾಮಿ, ಆದರೆ ಹೊಸದಾರಿಯಲ್ಲಿ ಓಡಿಸುವಾಗ ಮುಗ್ಗರಿಸಿ ಬೀಳಿಸದೆ ಕಾಪಾಡಿ" ಎಂದು ಕೇಳಿಕೊಳ್ಳುತ್ತಿದ್ದೇವೆ ಎಂದು ವಿನಂತಿಸಿಕೊಂಡರು. ಇಷ್ಟಾದರೂ ಅಂತಿಮವಾಗಿ ದಿವಾನರು ಮಾಡಿರುವ ಹುಕುಂ ಬದಲಾಯಿಸಲು ಸಾಧ್ಯವಿಲ್ಲ ಇರುವ ತೊಂದರೆಗಳನ್ನು ಡೆಪ್ಯೂಟಿ ಕಮೀಷನರ್ ಅಧ್ಯಕ್ಷತೆಯ ಸ್ಥಳೀಯ ಸಮಿತಿ ಪರಿಹಾರ ಮಾಡುತ್ತದೆ ಎಂದು ನಿಷ್ಠೂರವಾಗಿ ಹೇಳಿಬಿಟ್ಟರು. ನೊಂದ ರೈತರು ನಾವು ಕೇಳುವುದೊಂದನ್ನು ನಡೆಸದಿದ್ದ ಮೇಲೆ ನಾವೇನು ಮಾಡುವುದಕ್ಕಾಗುತ್ತದೆ ಎಂದು ಹೇಳಿ ಎಲ್ಲರೂ ಎದ್ದು ಹೊರಟು ಹೋದರು ಅಲ್ಲಿಗೆ ಸಭೆ ಮುಕ್ತಾಯವಾಯಿತು.[11]

ಈ ಹಿನ್ನೆಲೆಯಲ್ಲಿ ವಿಶ್ವ ಕರ್ನಾಟಕ ಪತ್ರಿಕೆಯು ಇರ್ವಿನ್ ನಾಲಾ ರೈತರ ಗೋಳು, ದಿವಾನರಲ್ಲಿ ರೈತರೆಲ್ಲ ಭೇಟಿ ಮಡಿದರೂ ಏನು ತೀರ್ಮಾನವಾಗಲಿಲ್ಲ ಎಂದು ಶೀರ್ಷಿಕೆ ಇಟ್ಟು ಬರೆಯಿತು. ಪತ್ರಿಕೆಯು ಪ್ರಭುತ್ವ ಕೊಟ್ಟ ವರದಿಗೂ, ರೈತ ಮಂಡಲಿ ಕೊಟ್ಟ ವರದಿಗೂ ಇರುವ ವಾಸ್ತವ ವ್ಯತ್ಯಾಸವನ್ನು ಎತ್ತಿ ತೋರಿಸಿದೆ.

ಅಂದರೆ ನಾಲಾ ರೈತರು ವಿನಮ್ರ, ವಿನಯದಲ್ಲಿಯೇ ನಿರ್ಭೀಡೆಯಿಂದ ತಮ್ಮ ಕುಂದು ಕೊರತೆಗಳನ್ನು ಮಂಡಿಸಿ ಪರ್ಯಾಯ ಸಲಹೆಗಳನ್ನು ಸೂಚಿಸಿದರೂ ಸರ್ಕಾರ ಅದನ್ನು ಮಾನ್ಯ ಮಾಡದೆ ತನ್ನ ಮೂಗಿನ ನೇರಕ್ಕೆ ನಡೆದು ಕೊಂಡದ್ದು ಕಾಣಬರುತ್ತದೆ. ದಕ್ಷತೆಗೆ ಸಲ್ಲುವ ನಡೆತೆಯಾದರೂ ರೈತರ ಅಂತರಂಗ ಅರಿಯುವ ನಡೆ ಮಾತ್ರ ಇಲ್ಲಿ ನಿರ್ಧಾಕ್ಷಿಣ್ಯವಾಗಿತ್ತು. ಅಂತೂ ಇರ್ವಿನ್ ನಾಲಾ ರೈತ ಚಳವಳಿ 1932ರ ಜುಲೈ ನಂತರವೂ ಪ್ರಭಾವಗೊಂಡಿತ್ತೆನ್ನಲೂ ಮೇಲಿನ ಸಂದರ್ಭಗಳು ಸಾಕ್ಷಿಯಾಗಿ ನಿಲ್ಲುತ್ತವೆ.

**ಅಡಿ ಟಿಪ್ಪಣಿಗಳು**

1. M.R.A. Proceedings, June 1931, Session, P-75.

2. M.R.A. Proceedings, Oct 1931, Dassion Session, PP-140-160.

3. ಡಾ, ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳವಳಿ ಸತ್ಯಾಗ್ರಹಗಳು (ಸಂ-1), 2006. ಬೆಂಗಳೂರು, ಪುಟ : 80-81

4. ಡಾ. ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳವಳಿ ಸತ್ಯಾಗ್ರಹಗಳು (ಸಂ-1), 2006. ಬೆಂಗಳೂರು, ಪುಟ : 83-84

5. M.R.A. Proceedings P- 140-160.

6. M.R.A. Proceedings June 1932 Session, P-89-90.

7. M.R.A. Proceedings June 1932 Session, P-94-95.

8. M.R.A. Proceedings June 1932 Session, P-200.

9. Legislative Council Proceedings Vol XVIII (1-8), Dated : 26-6-1934 to 04-07-1934

10. ತಿ.ತಾ. ಶರ್ಮಾ (ಸಂ) ವಿಶ್ವ ಕರ್ನಾಟಕ ಪತ್ರಿಕೆ, ಜೂನ್ 12, 1932.

11. ವಿಶ್ವ ಕರ್ನಾಟಕ ಜುಲೈ 7, 1932 ಸಂಚಿಕೆ, ಪುಟ 4,5 ಮತ್ತು 9.

## ಉಪಸಂಹಾರ

ಇರ್ವಿನ್ ನಾಲಾ ರೈತ ಚಳವಳಿಯ ಮೂಲ ಸರ್ಕಾರ ರೂಪಿಸಿದ ನೀರಾವರಿ ವ್ಯವಸ್ಥೆ ಹಾಗೂ ರೈತರ ಮೇಲೆ ವಿಧಿಸಿದ ಷರತ್ತು ತೆರಿಗೆ ಎನ್ನುಬಹುದು. ಎಂಡ್ಯ ಜಿಲ್ಲೆ ಬಯಲು ಪ್ರದೇಶ ಜೊತೆಗೆ ಬೆಂಗಾಡು ಹೀಗಾಗಿ ಈ ಪ್ರದೇಶದಲ್ಲಿ ಕೃಷಿ ಅಷ್ಟಕಷ್ಟೆ, ಇದ್ದು ರೈತರು ಮಳೆಯನ್ನೇ ಆಶ್ರಯಿಸಿದ್ದರು. ಕೆ.ಆರ್.ಎಸ್. ನಿರ್ಮಾಣದ ಪೂರ್ವದಲ್ಲಿ ಮೈಸೂರು ಅರಸರಾದಿಯಾಗಿ ನೀರಾವರಿ ವಿಸ್ತರಣೆಗೆ ಸಂಬಂಧಿಸಿದಂತೆ ಹಲವು ಪ್ರಯತ್ನ ಕಾಮಗಾರಿ ಕೆಲಸಗಳು ನಡೆದಿದ್ದವು. ಆದರೂ ಸಹ ಮಂಡ್ಯ ಭಾಗದ ಬಹುತೇಕ ಕೃಷಿ ಭೂಮಿ ನೀರಾವರಿ ಸೌಲಭ್ಯದಿಂದ ವಂಚಿತವಾಗಿದ್ದಿತು.

ಕೆ.ಆರ್.ಎಸ್. ನಿರ್ಮಾಣದ ನಂತರ ಮಂಡ್ಯದ ಮಳವಳ್ಳಿ, ಮದ್ದೂರು, ಶ್ರೀರಂಗಪಟ್ಟಣ ಇತ್ಯಾದಿ ಭಾಗದ ರೈತರಿಗಾಗಿ ಇರ್ವಿನ್ ನಾಲೆ ನಿರ್ಮಿಸಿ ಹೆಚ್ಚಿನ ಭೂಮಿಯನ್ನು ನೀರಾವರಿ ಕೃಷಿಗೆ ಒಳಪಡಿಸಲಾಯಿತು ನಿಜ, ಆದರೆ ಈ ನಾಲಾ ಪ್ರದೇಶದಲ್ಲಿ ಸರ್ಕಾರ ಜಾರಿಗೊಳಿಸಿದ

ಬ್ಲಾಕಗ ಸಿಸ್ಟಂ ಪದ್ಧತಿ ವಂತಿಕೆ ನೀರನ್ನು ಬಳಸಿಕೊಂಡಿದ್ದಕ್ಕೆ ಕೊಡಬೇಕಾದ ದರ ಎಲ್ಲವೂ ರೈತರಿಗೆ ಹೊರೆಯಾಗಿ ಪರಿಣಮಿಸಿ ಆಭಾಗದ ರೈತರು ಸರ್ಕಾರದ ಈ ಕ್ರಮಗಳ ವಿರುದ್ಧ ಹೋರಾಡುವಂತ ಪರಿಸ್ಥಿತಿ 1931-32 ರ ಅವಧಿಯಲ್ಲಿ ಉಂಟಾಗಿ ರೈತರ ತಾಳ್ಮೆ ಹಾಗೂ ಸಿಟ್ಟಿನ ರೂಪವನ್ನು ತೋರಿಸಿಕೊಟ್ಟರು.

ಈ ವೇಳೆಗಾಗಲೇ ಸ್ವಾತಂತ್ರ್ಯ ಹೋರಾಟ ಉಗ್ರರೂಪವನ್ನು ತಾಳಿದ್ದು ಭೌತಿಕವಾಗಿ ಜಾಗೃತರಾಗಿದ್ದ ರೈತರಲ್ಲಿ ಇರ್ವಿನ್ ನಾಲಾ ಹೋರಾಟವು ಅವ್ಯವಸ್ಥೆ ವಿರುದ್ಧ ಸಿಡಿದೇಳುವಂತೆ ಮಾಡಿದ ಹಾಗೂ ರೈತರಲ್ಲಿ ಆತ್ಮವಿಶ್ವಾಸವನ್ನು ಮತ್ತು ಗಟ್ಟಿತನವನ್ನು ಇಮ್ಮಡಿಗೊಳಿಸಿದ ಹೋರಾಟಗಳಲ್ಲಿ ಇದು ಒಂದಾಗಿತ್ತು. ಈ ಭಾಗದಲ್ಲಿ ಪರಿಚಯಿಸಿದ ಆಧುನಿಕ ಕೃಷಿ ಪದ್ಧತಿ ರೈತರಿಗೆ ಹೊಸದಾಗಿತ್ತು. ಈ ಯಾಂತ್ರೀಕೃತ ಬೇಸಾಯವನ್ನು ತಕ್ಷಣ ಒಪ್ಪಿಕೊಳ್ಳಲು ಸಿದ್ದರಿಲ್ಲದ ರೈತರು ತಮ್ಮದೇ ಆದ ಸಾಂಪ್ರದಾಯಕವಾದ ಪಾರಂಪರಿಕವಾದ ಕೃಷಿ ಪದ್ಧತಿಯನ್ನು ಅನುಸರಿಸಲು ಮುಂದಾದರೂ, ಕ್ರಮೇಣ ಆಧುನಿಕತೆಯ ಗಾಳಿಗೆ ಸಿಲುಕಿ ಇವೆರಡರ ನಡುವೆ ನಡೆದ ಸಂಘರ್ಷದಲ್ಲಿ ರೈತರು ಆಧುನಿಕ ಕೃಷಿ ಪದ್ಧತಿಯತ್ತ ತಮ್ಮ ಒಲವನ್ನು ವ್ಯಕ್ತಪಡಿಸಿದರು. ಇದರಿಂದ ಅವರ ಆದಾಯ ಹೆಚ್ಚಾಗಿ ಅವರ ಜೀವನಮಟ್ಟ ಉತ್ತಮಗೊಂಡಿತು ಎನ್ನಬಹುದು.

ಇದೊಂದು ರೀತಿಯಲ್ಲಿ ಈ ಚಳವಳಿಯನ್ನು ಅರ್ಥೈಸುವುದಾದರೆ ವಸಾಹತು ನೆಲೆಯಲ್ಲಿ ಅಧಿಕಾರಶಾಹಿ ವ್ಯವಸ್ಥೆಯ ವಿರುದ್ಧ ಸ್ಫೋಟಗೊಂಡ ಹೋರಾಟವಾಗಿದ್ದಿತು. ಬ್ರಿಟೀಷರ ಅಳ್ವಿಕೆಗೊಳಪಟ್ಟಿದ್ದ ಮೈಸೂರು ಸಂಸ್ಥಾನವನ್ನು ಅಭಿವೃದ್ಧಿ ಹೊಂದಿದ ಮಾದರಿ ರಾಜ್ಯವನ್ನಾಗಿ ಮಾಡಬೇಕೆಂದು ಹೊರಟ ಅಧಿಕಾರಿಗಳು ಇಲ್ಲಿ ಅವರು ಜಾರಿಗೊಳಿಸಿದ ಕ್ರಮಗಳು ನಿಯಮಗಳು ನಮ್ಮ ರೈತರಿಗೆ ಅಥವಾ ಜನತೆಗೆ ಹಿಡಿಸಲಿಲ್ಲ. ಅವರ ಅಜ್ಞೆಗಳು ಕಠಿಣವಾದಂತೆ ಸಿಟ್ಟಿಗೆದ್ದ ರೈತರು ಜನವರ್ಗ ತಮ್ಮ ಆಕ್ರೋಶವನ್ನು ಹೋರಾಟದ ನೆಲೆಯಲ್ಲಿ ವ್ಯಕ್ತಪಡಿಸಿದ್ದಿರಬೇಕು. ಹಾಗಾಗಿ ಈ ಚಳವಳಿ ಇವೆರೆಡರ ನಡುವೆ ನಡೆದ ಸಂಘರ್ಷವೂ ಆಗಿದ್ದಿತು ಎನ್ನಬಹುದು.

ಇರ್ವಿನ್ ನಾಲಾ ರೈತ ಚಳವಳಿಯಿಂದಾಗಿ ರೈತವರ್ಗದಲ್ಲಿ ವೈಚಾರಿಕ ಪ್ರಜ್ಞೆ, ಮುಂದಾಳತ್ವ, ಸಂಘಟನಾ ಪ್ರವೃತ್ತಿ ಹೆಚ್ಚಾಯಿತು. ಚಳವಳಿಯ ಉದ್ದೇಶಕ್ಕೆ ರೈತರು ಸ್ಪಂದಿಸಿದ ರೀತಿ ಮೈಲಿಗಟ್ಟಲೆ ನಡೆದುಹೋದ ಧೈರ್ಯ ಮೆಚ್ಚುಗೆಗೆ ಪಾತ್ರವಾಯಿತು. ಇಲ್ಲಿ ನಮಗೆ ಕಾಣುವುದು ಸಂಘರ್ಷ ತೀವ್ರತೆ ಎನ್ನುವುದಕ್ಕಿಂತ ಪರಿಸ್ಥಿತಿಯನ್ನು ನಿಭಾಯಿಸಿಕೊಳ್ಳುವ ರೈತ ಶಕ್ತಿ ಎನ್ನಿಸುತ್ತದೆ. ಇಲ್ಲಿ ಗಮನಾರ್ಹ ಸಂಗತಿ ಎಂದರೆ ರಾಜ ಪರಂಪರೆಯ ಆಡಳಿತದಲ್ಲಿ ಅನುಕೂಲ ಸೌಲಭ್ಯಗಳನ್ನು ಅನುಭವಿಸಿ ಗೌರವ ಭಕ್ತಿ ಬೆಳೆಸಿಕೊಂಡಿದ್ದ ರೈತ ಸಮುದಾಯ ಶಿಸ್ತಿನ ಚೌಕಟ್ಟನ್ನು ಮೀರಿ ಹೋಗಲಿಲ್ಲ. ಹಾಗೆಂದು ಅನ್ಯಾಯವೆನಿಸಿದಾಗ ಆ ಸಮುದಾಯ ಎದುರಿಸಿದ್ದು ರಾಜರನ್ನಲ್ಲ ಅಧಿಕಾರಿಗಳನ್ನು ಅಲ್ಲದೆ ವೈಚಾರಿಕತೆ ಪ್ರಜ್ಞೆ ಬೆಳೆಸಿಕೊಳ್ಳುವ ರೈತ ಮುಂದಾಳುಗಳ ರೈತ ಸಂಘಟನೆಯ ಸಲಹೆ ಮಾರ್ಗದರ್ಶನ ಬಯಸುವ ಸೂಚನೆಗಳನ್ನು ನಿಸ್ಸಂದಿಗ್ಧವಾಗಿ ತೋರಿತು. ಚಳವಳಿಯ ಉದ್ದೇಶಕ್ಕೆ ಸ್ಪಂದಿಸಿದ ಫಲವಾಗಿಯೆ ಮೈಲಿಗಟ್ಟಲೆ ನಡೆದು ಹೋದ ಧ್ಯೇಯ ನಿಷ್ಠ ರೈತರಾಗಿ ಪ್ರವರ್ತಿಸಿದರು. ಮುಂದೆ ಅಸಹಾಯಕತೆಗೆ ತುತ್ತಾಗಿ ಕ್ರಮೇಣ ಸರ್ಕಾರದ ವ್ಯವಸ್ಥೆಗೆ ಅನಿವಾರ್ಯವಾಗಿ ತಲೆಬಾಗಿದರು.

ಮತ್ತೊಂದು ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಜೂನ್ 1932 ರಿಂದ ಜುಲೈ 1934 ರವರೆಗೆ ಇರ್ವಿನ್ ನಾಲಾ ಪ್ರದೇಶದ ರೈತರ ಸಮಸ್ಯೆಗಳ ಬಗ್ಗೆ ಚರ್ಚೆಗಳು ನಡೆದಿದು. ಒದಗಿದ ಪರಿಹಾರಗಳು ಪೂರ್ಣ ತೃಪ್ತಿಕರವಲ್ಲದಿದ್ದರೂ ಸಾಕಷ್ಟು ಸಮಾಧಾನವನ್ನು ರೈತರಿಗೆ ಒದಗಿಸಿರುವುದಾಗಿದೆ. ಪ್ರತಿನಿಧಿ ಸಭೆ ಹಾಗೂ ಕೌನ್ಸಿಲ್‌ಗಳಲ್ಲಿ ಶಾಸಕ ಪ್ರತಿನಿಧಿಗಳು ಇರ್ವಿನ್ ನಾಲಾ ರೈತ ಚಳವಳಿಯ ಅನುಭವದಿಂದ ಕ್ಷೇತ್ರ ದರ್ಶನದಿಂದ ಮಾಹಿತಿ ಪಡೆದು ಅಧ್ಯಯನ ಚಿಂತನಗಳಿಂದ ಸಿದ್ದರಾಗಿ ಚರ್ಚೆಗೊಳಪಡಿಸುತ್ತಿದ್ದರು. ಸ್ವಾಗತಾರ್ಹ ಅಂಶ. ಇರ್ವಿನ್ ನಾಲಾ ಪ್ರದೇಶದ ರೈತರ ಮುಖ್ಯ ಚಳವಳಿ ಡಿಸೆಂಬರ್ 1931 ರಿಂದ ಜನವರಿ 1932 ರವರೆಗೆ ನಡೆಯಲು ಆ ಹಿಂದೆ ರೈತ ಪ್ರತಿನಿಧಿಗಳು ಆಗಾಗ್ಗೆ ಸಭೆ ನಡೆಸಿ ಸಣ್ಣ ಚಳವಳಿಯನ್ನು ರೂಪಿಸಿಕೊಂಡವರು. ಮುಂದೆ ವೀರಣ್ಣ ಗೌಡರ ನೇತೃತ್ವದಲ್ಲಿ ಅದಕ್ಕೆ ಬೃಹತ್ ಆಯಾಮ ಒದಗಿಸಿಕೊಟ್ಟರು. ಈ

ಚಳವಳಿ ಪ್ರತಿಧ್ವನಿ 1934ರವರೆಗೂ ಶಾಸಕರ ಮೂಲಕ ಕೇಳಿಸುತ್ತಿದ್ದುದಕ್ಕೆ ಅದು ಬೀರಿನ ಪ್ರಭಾವ ಕಾರಣವಾಗಿತ್ತು. ಚಳವಳಿಯ ಮಿತಿ ಎಂದರೆ ರೈತರ ಸಾಲಗಳಿಂದಾಗಿ ಮಾನಸಿಕ ಗಟ್ಟಿತನ ಕ್ರಮೇಣ ತಿಳಿಗೊಂಡು ಪರಿಸ್ಥಿತಿಗೆ ಹೊಂದಿಕೊಂಡು ಬಿಟ್ಟುದುದಾಗಿತ್ತು. ಅದರೆ ಸರ್ಕಾರ ಮುಂದೆ ಯಾವ ಆಜ್ಞೆ ಹೊರಡಿಸಲೂ ಎಚ್ಚರದಿಂದ ರೈತರ ಹಿತವನ್ನು ಪರಿಶೀಲಿಸುವ ಆಶ್ವಾಸನೆಯೊಡನೆ ಮುಂದುವರಿಯಬೇಕಾಯಿತು.

ರಾಜರ ಒಳ್ಳೆಯ ಕೆಲಸಗಳನ್ನು ಗೌರವದಿಂದ ನೆಚ್ಚಿಕೊಂಡು ಬಂದಿದ್ದ ವಿಶ್ವೇಶ್ವರಯ್ಯನವರಂತಹ ದಕ್ಷ ದಿವಾನರಿಂದಾಗಿ ಪಡೆದ ನೀರಿನ ಅನುಕೂಲಗಳನ್ನು ಕಂಡಿದ್ದ ಈ ರೈತರಿಗೆ ಮಾನಸಿಕ ಪ್ರಜ್ಞೆಯಲ್ಲಿ ಉಗ್ರವಾಗಿ ಎದುರು ಬೀಳುವ ಪ್ರವೃತ್ತಿ ಇರಲಿಲ್ಲ. ಬದಲು ಗೌರವಯುತ ಸಜ್ಜನಿಕೆಯಿಂದ ಅಹವಾಲು ಅರ್ಪಿಸುವ ಭಕ್ತಿಯಿಂದ ನಿಯೋಗ ಹೋಗುವುದೆ ಅವರ ದೂರು ದುಮ್ಮಾನಗಳನ್ನು ಹೇಳಿಕೊಳ್ಳುವ ಬಗೆ ಆಗಿತ್ತು. ಸರ್ ಮಿರ್ಜಾ ಇಸ್ಮಾಯಿಲ್ ದಿನವಾನರೆದುರೂ ರೈತ ಮುಖಂಡರು ಪ್ರಜಾ ಪ್ರತಿನಿಧಿಗಳೂ ಸಜ್ಜನಿಕೆಯಿಂದ ನಡೆದುಕೊಂಡರು. ಇಂಥ ಹಿನ್ನಲೆಯಿದ್ದವರಲ್ಲಿ ಶಿಸ್ತಾಗಿ ಪಾದಯಾತ್ರೆಯಲ್ಲಿ ಹೋಗಿ ದಿವಾನರಲ್ಲಿ ನಿವೇದಿಸಿದ ಅಹವಾಲು. ಆ ಕಾಲದ ಪ್ರತಿಭಟನೆಯ ರೂಪ ಇಂದಿನವರೆಗೆ ಅತಿ ಸೌಮ್ಯ ಈ ಚಳವಳಿಯೊಂದು ಸ್ವಾತಂತ್ರ್ಯ ಪೂರ್ವದ ಮೈಸೂರು ಸಂಸ್ಥಾನದ ಒಂದು ಮುಖ್ಯವಾದ ಶಿಸ್ತಿನ ರೈತ ಚಳವಳಿ ಆಗಿತ್ತು. ಸಂಘಟನಾತ್ಮಕ ಹೋರಾಟಕ್ಕೆ ಪ್ರಭುತ್ವದೆದುರು ನಾಂದಿ ಹಾಡಿದ ವರ್ತಮಾನದ ಮೊದಲ ಉದಾಹರಣೆಗೆ ಈ ಚಳವಳಿ ಆಗಿತ್ತು. ಇಲ್ಲಿ ಚಳವಳಿ ಕ್ರಮಬದ್ಧ ಹಾಗೂ ಯೋಜಿತ ಚಳವಳಿ ಆಗಿತ್ತು. ಇಂದಿನ ಹೋರಾಟಗಳ ಭರಾಟೆ ತೀವ್ರತೆಯ ಬೆಳಕಿನಲ್ಲಿ ಅದನ್ನು ನೋಡುವ ಅಗತ್ಯವಿಲ್ಲ. ಅಂದಿನ ಪ್ರಜ್ಞೆಗೆ, ಜಾಯಮಾನಕ್ಕೆ ಅದರ ಬಗೆಯೆ, ಚಳವಳಿಯ ಸ್ಪಷ್ಟ ನಿದರ್ಶನವಾಗಿತ್ತು.

# ಗ್ರಂಥಋಣ

1. Administraive report of the KRS and allied works (Hereafter the source will be citted as ARKRS & AW).

2. Annexure to the Report.

3. Draft Report on Krishnaraja Sagar work AdHOC Committee.

4 Government of India, "Indian Irrigation Commission Report", 1901-03.

5. Government of Mysore, "Report of the Nagana Gowda committee to Examine the Question of Scales of water - Rate and contribution in respect of Irrigation works in the Mysore State. 1955.

6. Government of Mysore, Cavery Reservior Land composition manual Karnataka states Archives.

7. Laying down the future policy regarding the KRS and other works. G.O. No. 115-126, KRS 723-724. Dated 1-09-1924.

8. Legislative Council Proceedings Vol XVIII (1-8), Dated : 26-6-1934 to 04-07-1934.

9. Proceedings of the Government of the Highness the Maharaja of Mysore. ( Hereafter the source will be cited as PGM) G.O No. PW 205-216, KRS - 226-237 Dated 07-06-1921.

10. Proceedings of the Mysore Legislative Coucil Debates (This source will be cited as PMLC) June 1926,

11. PGM . G.O No. 27-34, KRS - 94-101 Dated : 9-07-1926.

12. PGM, G.O. No. C 93-120,KRS-570-597 Dated 8-06-1931.

13 Proceedings of the Mysore Representative Assembly (PMRA) Dasara Session for october 1931 (Mysore 1932)

14. Proceedings of the Government, Feb - 1932.

15. Report of the special committee constituted in May 1950 on Krishnaraja sagara Reservior (Bangalore)

16. Report of the committee appointed by government for the development of Irrigation under the KRS-May 1927, P-3.

17. Report of Special Committee 1,

18. ಎಪಿಗ್ರಾಫಿಯ ಕರ್ನಾಟಕ, ಸಂಪುಟ VI , ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

19. ಟಿ.ಎ. ಪಾರ್ಥಸರಥಿ (ಸಂ)- ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ (2003)

20. ಜಿಲ್ಲಾ ಅಂಕಿ ಅಂಶಗಳ ನೋಟ 2007-08, ಜಿಲ್ಲಾ ಆರ್ಥಿಕ ಮತ್ತು ಸಾಂಖ್ಯೀಕ ಇಲಾಖೆ.

21. ಬಾಳೆಕುಂದ್ರಿ. ಎಸ್.ಜಿ. 1992, ಕಾವೇರಿ ಕರ್ನಾಟಕಕ್ಕಾಗಿರುವ ಅನ್ಯಾಯ ಮತ್ತು ದೊರಕಬೇಕಾದ ನ್ಯಾಯ; ಕನ್ನಡ ಶಕ್ತಿ ಕೇಂದ್ರ, ಬೆಂಗಳೂರು.

22. ಡಾ, ಎಸ್. ಚಂದ್ರಶೇಖರ್, "ಆಧುನಿಕ ಕರ್ನಾಟಕದ ಆಂದೋಲನಗಳು", ನಮ್ಮ ಪ್ರಕಾಶನ ಬಿಳಿಗೆರೆ ತಿಪಟೂರು ತಾಲ್ಲೂಕು-2002.

23. ಎಂ. ಚಂದ್ರ ಪೂಜಾರಿ (ಸಂ) "ಸಮುದಾಯ ಮತ್ತ ಸಹಭಾಗಿತ್ವ", ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ.

24. ದೀಕ್ಷಿತ್ ಜಿ.ಎಸ್. ಕುಪ್ಪ ಸ್ವಾಮಿ ಮತ್ತು ಮೋಹನ್ ಎಸ್.ಕೆ. "ಕರ್ನಾಟಕದಲ್ಲಿ ಕೆರೆ ನೀರಾವರಿ" (ಅನುವಾದ ಕಸ್ತೂರಿ) ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

25. ಗೋವಿಂದಯ್ಯ ಟಿ. : 1992, "ಕರ್ನಾಟಕ ನೀರಾವರಿ ಅರ್ಥಶಾಸ್ತ್ರ " ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ, ಬೆಂಗಳೂರು.

26. ಗೋವಿಂದಯ್ಯ ಟಿ. : 1997, "ರಾಜಕೀಯ ಸುಳಿಯಲ್ಲಿ ಆಲಮಟ್ಟಿ ಅಣೆಕಟ್ಟು ", ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ, ಬೆಂಗಳೂರು.

27. ಗೋವಿಂದಯ್ಯ ಟಿ. : 1997, "ಆತಂಕದ ಹಂತದಲ್ಲಿ ಕರ್ನಾಟಕ ನೀರಾವರಿ ಮತ್ತು ಗ್ರಾಮೀಣಾಭಿವೃದ್ಧಿ " ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ, ಬೆಂಗಳೂರು.

28. ಕಪನಿಪತಿ ಭಟ್ಟ - "ನೀರಾವರಿ", ಮೈಸೂರು.

29. ಎಚ್.ಎಲ್.ಕೇಶವ ಮೂರ್ತಿ, ಇರ್ವಿನ್ ನಾಲಾ ಹೋರಾಟ ವಜ್ರಮ ಹೋತ್ಸವ, ಶೂದ್ರಶಕ್ತಿ ಸಂಚಿಕೆ , ಫೆಬ್ರವರಿ 1-15, 2007,

30. Lowle R.H. 1934, An Introduction to cultural Autropology

31. ಪ್ರೊ ಡಿ. ಲಿಂಗಯ್ಯ, (1975), ಶಿವಪುರ ಧ್ವಜ ಸತ್ಯಾಗ್ರಹ, ಬೆಂಗಳೂರು,

32. ಪ್ರೊ. ಡಿ. ಲಿಂಗಯ್ಯ, ಎಚ್. ಕೆ. ವೀರಣ್ಣಗೌಡ (ಸಂಕ್ಷಿಪ್ತ ಜೀವನ ಚರಿತ್ರೆ) 1999, ಬೆಂಗಳೂರು,

33. ಮೂರ್ತಿ ಎನ್.ಎಸ್. 1976, "ನೀರಾವರಿ" ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

34. ಹೆಚ್.ವಿ.ನಾಗೇಶ., ಎ.ಇ. ಪುನೀತ್ (1984), ಭಾರತದಲ್ಲಿ ರೈತ ಹೋರಾಟಗಳು,

35. ನಂಜಣ್ಣನವರ. ಎಸ್.ಎಸ್. 1995 ಕರ್ನಾಟಕದ ಜಲಸಂಪನ್ಮೂಲಗಳು, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

36. ಡಾ. ಎಂ.ಜಿ. ನಾಗರಾಜ್, ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು (ಸಂಪುಟಗಳು) 2006, ಬೆಂಗಳೂರು.

37. ಎಂ.ವಿ.ನಾಡಕರ್ಣಿ (1986), ಕರ್ನಾಟಕದ ರೈತ ಹೋರಾಟಗಳು, ಬೆಂಗಳೂರು

38. ಹ.ಕ. ರಾಜೇಗೌಡ (ಸಂ) ಸಿಂಗಾರ (ಕೆ. ಸಿಂಗಾರಿಗೌಡ ಅಭಿನಂದನಾ ಗ್ರಂಥ), 1988, ಮಂಡ್ಯ,

39. ಎನ್.ಪಿ. ಶಂಕರ್‌ನಾರಾಯಣರಾವ್, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, 1991, ಬೆಂಗಳೂರು.

40. ಶೇಷ ನಾರಾಯಣ, ಕಾವೇರಿ (ಒಂದು ಚಿಮ್ಮು ಒಂದು ಹೊರಳು), ಮೈಸೂರು-2003.

41. ಸೋಮಶೇಖರ ರೆಡ್ಡಿ. 1993 "ಹೂತಿರುವ ನಿಧಿ" (ಅನು) : ಸೇತು ಮಾಧವ ಜೋಡಿದಾರ್.

42. ವಿರೂಪಾಕ್ಷಿ ಪೂಜಾರಹಳ್ಳಿ, "ಜಲ ಸಂಬಂಧಿ ಚಳವಳಿಗಳು" ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

43. ಎಚ್.ಕೆ.ವೀರಣ್ಣಗೌಡ, ಬದುಕು-ಮೆಲುಕು, 1974, ಮೈಸೂರು.

44. ವೀರಭದ್ರಪ್ಪ ಬಿಸ್ಲಳ್ಳಿ (ಸಂ) ಪ್ರೊಫೆಸರ್ ಎಂ.ಡಿ.ಎನ್., ಅಭಿರುಚಿ ಪ್ರಕಾಶನ ಮೈಸೂರು.

45. ವಿಶ್ವ ಕರ್ನಾಟಕ ಪತ್ರಿಕೆ.

46. ವಿಜಯ ಕರ್ನಾಟಕ, ಸಂಪುಟ-8, ಸಂಚಿಕೆ 219, ಜುಲೈ 20, 2008.

47. ಡಾ.ಕೆ.ಜೆ. ಸುರೇಶ್, ಮಂಡ್ಯ ಜಿಲ್ಲಾ ರೈತ ಚಳವಳಿ, ಒಂದು ಅಧ್ಯಯನ : ಅಪ್ರಕಟಿತ ಪ್ರೌಢ ಪ್ರಬಂಧ, 1999, ಮೈಸೂರು ವಿಶ್ವವಿದ್ಯಾನಿಲಯ,

48. K.S. Vijayalakshmi, unpublised Thesis submitted to Bangalore university "Irrigation policy in Princly Mysore",

